ಬೆಲೆ : ಎರಡು ಆಣೆ

ಚಂದಾ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೮-೦
೬ ತಿಂಗಳಿಗೆ ,, ೩-೮-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವವು.

# ಕರ್ಮವೀರ

KARMAVEER
WEEKLY
HUBLI
DEC. 23
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor: H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೨೩ — ೧೨ — ೧೯೪೬ [ ಸಂಚಿಕೆ ೩೫

# ಸ್ವಾತಂತ್ರ್ಯವೋ ಕ್ರಾಂತಿಯೋ?

ಶ್ರೀ. ಕೆ. ಸಂತಾನಂ ಅವರ ಲೇಖದ ಆಧಾರದಿಂದ

## ಘಟನಾ ಸಮಿತಿಯನ್ನೆದುರಿಸಿದ ಗಂಭೀರ ಪ್ರಶ್ನೆ: ಫ್ರೆಂಚ—ಅಮೇರಿಕನ್ ಹಾಗು ರಶಿಯನ್ ಕ್ರಾಂತಿಗಳು ಒಂದೆಡೆ ಸೇರಿದಷ್ಟು ದೊಡ್ಡ ಕ್ರಾಂತಿಯ ಸಂಭವ

೧೯೪೬ನೆ ಇಸವಿ ಡಿಸೆಂಬರ ೯ ಹಿಂದೀ ಇತಿಹಾಸದ ಮಹಾ ದಿವಸಗಳಲ್ಲೊಂದಾಗಿದೆ. ಆ ದಿನ ಮುಂಜಾನೆ ೧೧ ಗಂಟೆಗೆ ಹಿಂದುಸ್ತಾನದ ಮೊದಲನೆ ಘಟನಾ ಸಮಿತಿಯ ಸಭೆ ಕೂಡಿತು. ಅದರ ಸದಸ್ಯರಲ್ಲಿ ಬಹು ಜನರು ೧೯೨೦ ರಿಂದೀಚೆಗೆ ಸ್ವಾತಂತ್ರ್ಯದ ಹೋರಾಟದಲ್ಲಿ ನುರಿತ ಸೈನಿಕರು. ಉಳಿದವರು ಘಟನಾ ಪಂಡಿತರಾದ ವೃದ್ಧರು. ಅವರ ಜ್ಞಾನದಿಂದ ಘಟನಾ ರಚನೆಯ ಕೆಲಸದಲ್ಲಿ ಉಪಕಾರವಾಗುವದು. ಆದರೆ ಹಿರಿಯರು ಕಿರಿಯರೆಲ್ಲರೂ ಒಂದು ವಿಷಯವನ್ನು ಚನ್ನಾಗಿ ತಿಳಿದುಕೊಳ್ಳಬೇಕು. ಅವರು ತಮ್ಮ ಕಾರ್ಯದಲ್ಲಿ ಯಶಸ್ವಿಗಳಾದರೆ ಆಗ ಹಿಂದುಸ್ತಾನ ತನ್ನ ಸ್ವಾತಂತ್ರ್ಯವನ್ನು ಶಾಂತಿಯಿಂದ ಸಾಧಿಸಿಕೊಳ್ಳಬಹುದು. ಒಂದೊಪ್ಪತ್ತು ಅವರು ಅಯಶಸ್ವಿಗಳಾದರೆ; ಅಭೂತಪೂರ್ವ ಪ್ರಮಾಣದಲ್ಲಿ ಅತುಲ ಕ್ಲೇಶ ದುಃಖಗಳಿಂದ ಯುಕ್ತವಾದ ಕ್ರಾಂತಿ ಅನಿವಾರ್ಯವಾಗಿ ಸಂಘಟಿಸದಿರದು.

### ಟೆನಿಸ್—ಕೋರ್ಟ್ ಪ್ರತಿಜ್ಞೆ

ಕೆಲವಂಶದಲ್ಲಿ ಹಿಂದೀ ಘಟನಾ ಸಮಿತಿಗೂ ಫ್ರಾನ್ಸಿನ ವರ್ಸಾಯಿಯಲ್ಲಿ ೧೭೮೯ ಮೇ ೫ ಕ್ಕೆ ಸೇರಿದ ಎಸ್ಟೇಟ್ಸ್-ಜನರಲ್ ಸಭೆಗೂ ಹೋಲಿಕೆ ಉಂಟು. ಪ್ರಾರಂಭದಲ್ಲಿ ಅದಕ್ಕೆ ಫ್ರೆಂಚ ಪಾರ್ಲಿಮೆಂಟಿನ ಜನಪ್ರಿಯಭವನವೆಂಬ ಹೆಸರಿತ್ತು. ಆದರೆ ಕ್ಷಿಪ್ರದಲ್ಲಿಯೆ ಅದು ಘಟನಾ ಸಮಿತಿಯಾಗಿ ರೂಪುಗೊಂಡಿತು. ಬರಗಾಲ, ರೋಗ, ದಬ್ಬಾಳಿಕೆಗಳಿಂದ ಪ್ರಕ್ಷುಬ್ಧವಾಗಿದ್ದ ಜನತೆಯನ್ನು ಸಂತೈಸುವ ಮಾರ್ಗವೆಂದು ಹದಿನಾರನೆ ಲುಯಿ ಅರಸ ಆ ಸಭೆಯನ್ನು ಕರೆದನು. ಆದರೆ ಅದರ ಉಗ್ರಮನೋಭಾವವನ್ನು ಕಂಡ ನಂತರ ಅವನಿಗೂ ಅವನ ಬೆಂಬಲಿಗರಾದ ಶ್ರೀಮಂತರಿಗೂ ಪಾದ್ರಿಗಳಿಗೂ ಅದರ ಬಗ್ಗೆ ಭಯವುಂಟಾಯಿತು. ಅವರೆಲ್ಲರೂ ಪ್ರಾರಂಭದಿಂದಲೂ ಅದರ ಮೇಲೆ ದ್ವೇಷವನ್ನೇ ಸಾಧಿಸಿದರು. ಈ ಸಮಿತಿಯ ಸದಸ್ಯರು ತಮ್ಮ ಸಭಾಸ್ಥಳಕ್ಕೆ ಬಂದೊಡನೆ ಭವನದ ಬಾಗಿಲು ಮುಚ್ಚಿದ್ದನ್ನೂ ಸುತ್ತಲೂ ಸೈನಿಕರು ಕಾವಲಿದ್ದುದನ್ನೂ ಕಂಡರು. ಆದರೆ ಅವರು ಎದೆಗುಂದದೆ ಹತ್ತಿರದಲ್ಲಿಯೇ ಇದ್ದ ಟೆನಿಸ್ ಆಟದ ಬಯಲಲ್ಲಿ ಕೂಡಿದರು. ಅಲ್ಲಿ ಅವರಲ್ಲಿ ಪ್ರತಿಯೊಬ್ಬನೂ "ಒಂದು ಘಟನೆಯನ್ನು ರಚಿಸಿ ಅದನ್ನು ಸಿದ್ಧವಾಗಿ ಸ್ಥಾಪಿಸುವವರೆಗೆ ಅಗಲಿಹೋಗುವದಿಲ್ಲೆಂದು, ಸಾಧ್ಯವಿದ್ದಲ್ಲೆಲ್ಲ ಸಭೆ ಸೇರುವದೆಂದು" ಪ್ರತಿಜ್ಞೆ ತೊಟ್ಟರು. ಅರಸ ಲುಯಿ ಸಭೆಯನ್ನು ಬಲಾತ್ಕಾರದಿಂದ ಮುರಿಯಲು ಕಳಿಸಿದ ಸೈನಿಕರು ಗುಂಡು ಹಾರಿಸಲು ನಿರಾಕರಿಸಿದ್ದೂ ಅದರ ನಂತರ ಬಂದ ಮಹಾಕ್ರಾಂತಿ ಹಾಗೂ ರಾಜಕುಟುಂಬದ ವಧೆ ಮುಂತಾದವು ಇತಿಹಾಸದಲ್ಲಿ ರಕ್ತದಿಂದ ಬರೆಯಲ್ಪಟ್ಟಿವೆ. ಹಿಂದೀ ಘಟನಾ ಸಮಿತಿಯ ಸದಸ್ಯರು ಸಭೆ ಸೇರಬಂದಾಗ ಸಭಾಭವನ ಮುಚ್ಚಿರಲಿಲ್ಲವೆಂಬುದೂ ಸೈನಿಕರು ಅವರ ಸಭೆಯನ್ನು ಮುರಿಯಲು ಬರಲಿಲ್ಲವೆಂಬುದೂ ನಿಜವಾಗಿದ್ದರೂ ಮುಸ್ಲಿಂ ಲೀಗ್ ಸದಸ್ಯರ ಬಹಿಷ್ಕಾರ ಮತ್ತು ಬ್ರಿಟಿಶ ಸರಕಾರದ ಇತ್ತಂಡ ಧೋರಣೆ ಇವುಗಳನ್ನು ನೋಡಿದರೆ ಹಿಂದೀ ಘಟನಾ ಸಮಿತಿಗೆ, ಫ್ರಾನ್ಸಿನ ಮೊದಲನೆ ಘಟನಾ ಸಮಿತಿಯನ್ನೆದುರಿಸಿದ ಸಮಸ್ಯೆಗಳಷ್ಟೆ ಗಂಭೀರವಾದ ಸಮಸ್ಯೆಗಳನ್ನೆದುರಿಸುವ ಪಾಳಿ ಬರುವಂತೆ ಕಾಣುತ್ತದೆ. ಮುಂಬರುವ ಕೆಲ ತಿಂಗಳುಗಳಲ್ಲೊಂದು ದಿನ ಹಿಂದೀ ಘಟನಾ ಸಮಿತಿಯ ಸದಸ್ಯರೂ ಭಾರತದ ಘಟನೆಯನ್ನು ರಚಿಸಿ ಅದನ್ನು ಸ್ಥಿರವಾಗಿ ಪ್ರತಿಷ್ಠಾಪಿಸುವವರೆಗೂ ಅಗಲುವಂತಿಲ್ಲ, ವಿಶ್ರಮಿಸುವಂತಿಲ್ಲ, ಎಂಬ ಪ್ರತಿಜ್ಞೆಯನ್ನು ಕೈಕೊಳ್ಳಬೇಕಾದ ಪ್ರಸಂಗ ಬಂದರೆ ಆಶ್ಚರ್ಯಪಡಬೇಕಾಗಿಲ್ಲ.

ಫ್ರೆಂಚ ಕ್ರಾಂತಿಯ ಪ್ರಾರಂಭ ಸ್ವಾತಂತ್ರ್ಯ, ಸಮಾನತೆ ಮತ್ತು ಬಂಧುಭಾವ ಎಂಬ ಉದಾತ್ತ ಧ್ಯೇಯತ್ರಯಗಳಿಂದಾಯಿತು. ನಮ್ಮ ರಾಜ್ಯಘಟನೆಯ ಧ್ಯೇಯಗಳಾದರೂ ಹಾಗೆಯೆ ಇರಬೇಕು. ಮತ್ತು ಪಂಡಿತ ಜವಾಹರಲಾಲರು ಈಗ ಮಂಡಿಸಿರುವ ಧ್ಯೇಯದ ಗೊತ್ತುವಳಿಯಾದರೂ ಅದೇ ತತ್ವಗಳಿಂದ ಸ್ಫೂರ್ತವಾಗಿದೆ. ೧೭೮೯ ಅಗಸ್ಟ ೨೬ನೆ ದಿನ ಫ್ರೆಂಚ ಘಟನಾ ಸಮಿತಿ "ಮಾನವ ಹಕ್ಕುಗಳ" ಪ್ರಸಿದ್ಧ ಘೋಷಣೆಯನ್ನು ಮಾನ್ಯ ಮಾಡಿತು. ಈ ಕೆಳಗಿನವು ಅದರಲ್ಲಿ ಕೆಲ ಸೂತ್ರಗಳು. "ಮಾನವರು ಹುಟ್ಟಾ ಸಮಾನರಾಗಿರುತ್ತಾರೆ ಮತ್ತು ಅವರ ಹಕ್ಕುಗಳು ಸಮಾನವಾಗಿಯೆ ಉಳಿಯುವವು. ಸಾರ್ವಭೌಮತ್ವದ ತತ್ವ ರಾಷ್ಟ್ರದಲ್ಲಿ ನಿಹಿತವಾಗಿದೆ. ಬೇರಾರಿಗೂ ಹಾನಿಕರವಾಗದಂತೆ ಬೇಕಾದುದನ್ನು ಮಾಡುವ ಹಕ್ಕೇ ಸ್ವಾತಂತ್ರ್ಯ. ಇದಕ್ಕೆ ಕಾಯಿದೆಯಿಂದ ಮಾತ್ರ ಸೀಮೆಯನ್ನು ಕಲ್ಪಿಸಬಹುದು. ಕಾಯಿದೆಯೆಂಬುದು ಸಾಮಾನ್ಯ ಜನಸಮುದಾಯದ ಇಚ್ಛೆಯ ಅಭಿವ್ಯಕ್ತಿ. ಅದನ್ನು ಮಾಡುವದರಲ್ಲಿ ಸ್ವತಃ ಇಲ್ಲವೆ ತನ್ನ ಪ್ರತಿನಿಧಿಯ ಮೂಲಕ ಭಾಗವಹಿಸುವ ಹಕ್ಕು ಪ್ರತಿಯೊಬ್ಬ ನಾಗರಿಕನಿಗಿರತಕ್ಕದ್ದು. ಅದು ಸಂರಕ್ಷಿಸುವಲ್ಲಿಯೂ ಶಿಕ್ಷಿಸುವಲ್ಲಿಯೂ ಎಲ್ಲರಿಗೂ ಸಮಾನವಾಗಿರಬೇಕು."

### ಅಮೇರಿಕನ್ ಕ್ರಾಂತಿ

೧೭೭೬ ಜುಲೈ ೪ ನೆ ದಿನ ಸಾರಲ್ಪಟ್ಟ ಅಮೇರಿಕೆಯ ಸ್ವಾತಂತ್ರ್ಯ ಘೋಷಣೆಯೊಡನೆ ಪ್ರಾರಂಭವಾದ ಮಹಾ ಅಮೇರಿಕನ್ ಕ್ರಾಂತಿಯನ್ನೂ ನಾವು ಈ ಸಂದರ್ಭದಲ್ಲಿ ನೆನೆದುಕೊಳ್ಳಬಹುದು. ಆ ಘೋಷಣೆಯ ಈ ಕೆಳಗಿನ ಅಂಶ ಕಾಲದೇಶಾತೀತವಾಗಿದ್ದು ಸ್ವಾತಂತ್ರ್ಯಕಾಂಕ್ಷಿಗಳಿಗೆ ವಿದೇಶಿ ಆಳಿಕೆಯ ವಿರುದ್ಧ ಹೋರಾಡುವವರಿಗೆಲ್ಲ ಯಾವಾಗಲೂ ಸ್ಫೂರ್ತಿದಾಯಕವಾಗಿದೆ. "ಎಲ್ಲ ಮನುಷ್ಯರು ಸಮಾನರಾಗಿ ಸೃಜಿಸಲ್ಪಟ್ಟಿದ್ದಾರೆಂಬ, ಅವರ ಸೃಷ್ಟಿಕರ್ತನು ಅವರಿಗೆ ಕೆಲ ಅನಪಹಾರ್ಯ ಹಕ್ಕುಗಳನ್ನು ದಯಪಾಲಿಸಿದ್ದಾನೆಂಬ, ಈ ಹಕ್ಕುಗಳಲ್ಲಿ ಪ್ರಾಣ, ಸ್ವಾತಂತ್ರ್ಯ ಮತ್ತು ಸುಖಶೋಧ ಇವು ಸೇರಿವೆಯೆಂಬ ಈ ಸತ್ಯಗಳು ಸ್ವಯಂಸಿದ್ಧವಾಗಿವೆಯೆಂದು ನಮ್ಮ ನಂಬಿಕೆ. ಈ ಹಕ್ಕುಗಳ ಸಂರಕ್ಷಣೆಗಾಗಿ ಮಾನವರಲ್ಲಿ ಸರಕಾರಗಳು ಸ್ಥಾಪಿಸಲ್ಪಡುವವು. ಅವುಗಳ ನ್ಯಾಯವಾದ ಅಧಿಕಾರಗಳು ಆಳಲ್ಪಡುವವರಿಂದ ದಯಪಾಲಿಸಲ್ಪಡುತ್ತವೆ. ಯಾವುದೊಂದು ಬಗೆಯ ಸರಕಾರ ಎಂದಾದರೂ ಈ ಉದ್ದೇಶಗಳಿಗೆ ಬಾಧಕವಾದರೆ ಅದನ್ನು ಬದಲಿಸುವ ಅಥವಾ ಕಿತ್ತೊಗೆಯುವ ಮತ್ತು ತಮಗೆ ಸುರಕ್ಷಿತತೆಯನ್ನೂ ಸೌಖ್ಯವನ್ನೂ ಕೊಡಬಹುದೆಂದು ತಮಗನಿಸಬಹುದಾದ ತತ್ವಗಳ ಮೇಲೆ ಅನುಕೂಲವಾದ ರೂಪದಲ್ಲಿ ಹೊಸ ಸರಕಾರವನ್ನು ಸ್ಥಾಪಿಸುವ ಹಕ್ಕು ಜನತೆಗಿರಬೇಕು." ಬ್ರಿಟನ್ನಿನೊಡನೆ ನಮ್ಮ ಸ್ವಾತಂತ್ರ್ಯದ ಹೋರಾಟ ಇನ್ನಿಲ್ಲವೆಂದೂ ೧೭೮೭ ರಲ್ಲಿ ಫಿಲಡಲ್ಫಿಯಾದಲ್ಲಿ ಸೇರಿದ ಅಮೇರಿಕೆಯ ಸಂಯುಕ್ತ ಪರಿಷತ್ತಿನಂತೆ ನಮ್ಮ ಘಟನಾ ಸಮಿತಿಯೂ ಘಟನಾ ನಿರ್ಮಾಣ ಕಾರ್ಯವನ್ನು ಸಾಗಿಸುವಂತಾಗಲೆಂದೂ ಹಾರೈಸೋಣ. Growth of the American Republic (ಅಮೇರಿಕನ್ ಪ್ರಜಾ ರಾಜ್ಯದ ವಿಕಾಸ) ಎಂಬ ಪುಸ್ತಕದಲ್ಲಿ ಸಾಮ್ಯುಯೆಲ ಇಲಿಯಟ್ ಮೋರಿಸನ್ ಮತ್ತು ಹೆನ್ರಿ ಸ್ಟೀಲ ಕೊಮೇಜರರು ಫಿಲಡಲ್ಫಿಯಾ ಪರಿಷತ್ತಿನ ಕಾರ್ಯಸಾಧನೆಯ ಬಗ್ಗೆ ಹೀಗೆ ಹೇಳಿದ್ದಾರೆ. "ಸಂಯುಕ್ತ ಘಟನೆಯೆಂಬುದು ಸಾಮ್ರಾಜ್ಯ ಸಂಘಟನೆಯ ಸಮಸ್ಯೆಯ ೨೫ ವರ್ಷಗಳ ತಿಕ್ಕಾಟದ ಫಲಿತಾಂಶವಾಗಿತ್ತು. (ಬ್ರಿಟಿಶ) ಪಾರ್ಲಮೆಂಟಿನ ಸಾರ್ವಭೌಮತ್ವಕ್ಕೆ ಅಮೇರಿಕನ್ ವಸಾಹತುಗಾರರು ವಿರೋಧಿಗಳಾಗಿದ್ದರು. ಸಾಮಂತ ಸ್ವರಾಜ್ಯದ ಬೇಡಿಕೆಯನ್ನು (ಬ್ರಿಟಿಶ) ನಾರ್ಥ ಮಂತ್ರಿಮಂಡಲ ನಿರಾಕರಿಸಿತ್ತು. ಆಮೇಲೆ ೧೭೭೮ ರಲ್ಲಿ ಬ್ರಿಟಿಶ ಸರಕಾರ ಅದನ್ನು ತಡವಾಗಿ ಕೊಡಮಾಡಿದಾಗ ಅಮೇರಿಕನ್ನರು ಅದನ್ನು ತಿರಸ್ಕರಿಸಿದರು. ಒಕ್ಕೂಟದ ಯೋಜನೆ ತೀರ ಬಿಗಿಯಾಗಿಯೂ ಅಪೂರ್ಣವಾಗಿಯೂ ಇತ್ತು. ಈ ಎಲ್ಲ ಬಗೆಯ ಸಮಸ್ಯಾಪರಿಹಾರಪ್ರಯತ್ನಗಳ ಚಿತೆಯ ಮೇಲೆ ಸಂಯುಕ್ತ ಪರಿಷತ್ತು ಹೊಸ ಸಂಯುಕ್ತ ಪದ್ಧತಿಯನ್ನು ರೂಪಿಸಿತು. ಅದರ ಮೂಲಕ ಕೇಂದ್ರ ಹಾಗೂ ಸ್ಥಾನಿಕ ಸರಕಾರಗಳಲ್ಲಿ ಅಧಿಕಾರಗಳನ್ನು ಯಶಸ್ವಿಯಾಗಿ ಹಂಚಲಾಯಿತು. ಎಲ್ಲವೂ ಜನತೆಯ ಸಾರ್ವಭೌಮತ್ವದ ಆಧಾರದ ಮೇಲೆ ನಿರ್ಮಿಸಲ್ಪಟ್ಟಿತು. ಈ ಸಂಯುಕ್ತ ರಾಜ್ಯಪದ್ಧತಿಯ ನಿರ್ಮಾಣವೇ ಶಾಸನ ನಿರ್ಮಾಣದ ಕಲೆಗೂ ವಿಜ್ಞಾನಕ್ಕೂ ಅಮೇರಿಕೆಯಿಂದಾದ ಅತಿಮಹತ್ವದ ಮೌಲಿಕ ಸೇವೆ. ಪ್ರಜಾರಾಜ್ಯಗಳು ಹಿಂದೆ ಇದ್ದಿರಬಹುದು—ಪ್ರಜಾತಂತ್ರಗಳು ಕೂಡ. ಆದರೆ ವಿಭಿನ್ನ ಹಿತಸಂಬಂಧಗಳಿಂದ ಮಿಶ್ರಿತವಾಗಿರುವ ವಿಸ್ತಾರವಾದ ಪ್ರದೇಶದಲ್ಲಿ ಸ್ವಾತಂತ್ರ್ಯಕ್ಕೆ ಅವಿರೋಧವಾದ ರೀತಿ ಸಾಮ್ರಾಜ್ಯವನ್ನು ಘಟಿಸುವ ಯಶಸ್ವೀ ಪ್ರಯತ್ನ ಹಿಂದೆಂದೂ ಆಗಿದ್ದಿಲ್ಲ." ನಮ್ಮ ಘಟನಾ ಸಮಿತಿಯಿಂದ ರಚಿಸಲ್ಪಡುವ ಘಟನೆಯಾದರೂ ಹಿಂದುಸ್ತಾನದ ವಿಶಾಲ ಪ್ರದೇಶದಲ್ಲಿ ಸ್ವಾತಂತ್ರ್ಯವನ್ನೂ ಸುವ್ಯವಸ್ಥೆಯನ್ನೂ ಒಂದೆಡೆ ಕೂಡಿಸುವಲ್ಲಿ ಯಶಸ್ವಿಯಾಗಬೇಕೆಂದೂ ಹಾರೈಸೋಣ.

### ಸಾಮಾಜಿಕ ಧ್ಯೇಯಗಳು

೧೯೪೬ ನೇ ಇಸವಿಯಲ್ಲಿ ಘಟನೆಯನ್ನು ನಿರ್ಮಿಸಬೇಕೆಂದು ಪ್ರಯತ್ನಿಸುವವರಾರೂ ಆಧುನಿಕ ಯುಗದ ಇನ್ನೊಂದು ಮಹಾಕ್ರಾಂತಿಯನ್ನು—ಸೋವಿಯಟ್ ಕ್ರಾಂತಿ ( ೧೯೧೭ ) ಯನ್ನು—ಮರೆತರೆ ನಡೆಯದು. ಫ್ರೆಂಚ ಮತ್ತು ಅಮೇರಿಕನ್ ಕ್ರಾಂತಿಗಳ ಕಾಲಕ್ಕೆ ಸಮಾಜ ಮಧ್ಯಯುಗದಲ್ಲಿತ್ತು. ಆಗ ಸೊತ್ತೆಂಬುದು ಮನೆ, ಹೊಲ, ಗೋಧನಗಳಿಗಷ್ಟೆ ಸೀಮಿತವಾಗಿತ್ತು., ಆದುದರಿಂದ ಸ್ವಾತಂತ್ರ್ಯದ ಹಕ್ಕುಗಳೂ ಆಸ್ತಿಯ ಹಕ್ಕುಗಳ ಸಂಗ-ಸಂಗಡಲೇ ಸಾಗಿದವು. ಆದರೆ ಕಳೆದ ೧೫೦ ವರ್ಷಗಳಲ್ಲಿ, ವಿಜ್ಞಾನ, ಆವಿಷ್ಕಾರ ಮತ್ತು ಔದ್ಯೋಗಿಕ ತಂತ್ರದ ಅಭಿವೃದ್ಧಿಯಿಂದಾಗಿ ಪ್ರತಿಯೊಂದು ರಾಜ್ಯದಲ್ಲಿಯೂ ಜನಸಮುದಾಯಗಳು ಕೂಲಿಯಾಳುಗಳಾಗಿ ದುಡಿದು ಕೆಲವೇ ಜನ ಶ್ರೀಮಂತ, ಪ್ರಬಲರ ಅಧೀನದಲ್ಲಿರಬೇಕಾಗಿ ಬಂದಿದೆ. ಸ್ವಾತಂತ್ರ್ಯಕ್ಕಾಗಿ ಸಂಪತ್ತಿಯ ರಾಷ್ಟ್ರೀಕರಣ ಅವಶ್ಯವಾಗಿ ಬಿಟ್ಟಿದೆ. ಹಿಂದುಸ್ತಾನದ ಹೊಸ ರಾಜ್ಯಘಟನೆಯಲ್ಲಿ ಈ ಧ್ಯೇಯವನ್ನು ಸಾಧಿಸದಿದ್ದರೆ ಅದು ನಿಷ್ಪ್ರಯೋಜಕವಾಗಿ ಬಿಟ್ಟೀತು.

### ಸ್ವಾತಂತ್ರ್ಯವೋ ಕ್ರಾಂತಿಯೋ?

ಘಟನಾ ಸಮಿತಿ ಪೂರ್ಣ ಘಟನೆಯನ್ನು ಸಿದ್ಧಗೊಳಿಸಬಹುದೇ? ಮುಸ್ಲಿಂ ಲೀಗು ಒಳಬರುವದೆ? ಯಾವಾಗ? ಬ್ರಿಟಿಶ ಸರಕಾರದವರು ಘಟನಾ ಸಮಿತಿಯ ಕೆಲಸವನ್ನು ಇನ್ನಷ್ಟು ತೊಡಕಿಲ್ಲದೆ ಸಾಗಗೊಡುವರೆ? ಈ ಎಲ್ಲ ಪ್ರಶ್ನೆಗಳು ಘಟನಾ ಸಮಿತಿಯ ಸದಸ್ಯರ ಮನಸಿನಲ್ಲಿವೆ. ನಮಗೆ ಊಹಾಪೋಹ, ಭವಿಷ್ಯಕಥನಗಳ ಉದ್ದೇಶವಿಲ್ಲದಿದ್ದೂ ಈ ಪ್ರಶ್ನೆಗಳು ದಿನ ಹೋದಂತೆ ಜಟಿಲವಾಗುತ್ತಿರುವದು ಕಾಣಬರುತ್ತದೆ. ಘಟನಾ ಸಮಿತಿ ಒಂದು ಘಟನೆಯನ್ನು ನಿರ್ಮಿಸಿ ಕ್ಷಿಪ್ರದಲ್ಲಿಯೇ ಅದನ್ನು ಆಚರಣೆಗೆ ತರುವಂತಾಗದಿದ್ದರೆ ಹಿಂದುಸ್ತಾನವನ್ನು ಅಗಾಧವಾದ ಕ್ರಾಂತಿಯತ್ತ ತಳ್ಳಿಕೊಂಡು ಹೋಗದಂತೆ ತಡೆಯುವ ಶಕ್ತಿ ಜಗತ್ತಿನಲ್ಲಿ ಯಾವುದೂ ಇಲ್ಲ. ಹಿಂದೀ ಕ್ರಾಂತಿ ಬಂದರೆ, ಒಂದಾಗಿ ಮೇಲೆ ಹೇಳಿದ ಮೂರೂ ಕ್ರಾಂತಿಗಳನ್ನು ಒಳಗೊಳ್ಳುವದು. ಬ್ರಿಟಿಶ ಸಾಮ್ರಾಜ್ಯವಾದದ ಕೊನೆಯ ಅವಶೇಷಗಳೊಡನೆ ಅದು ಹೋರಾಡಬೇಕಾಗುವದು. ಶ್ರೀಮಂತ ವರ್ಗಗಳ ವಿರುದ್ಧ ಅದು ಬಂಡೇಳುವದು. ಅದು ಜಾತೀಯ ಮತ್ತು ವರ್ಗೀಯ ಸ್ವರೂಪದ ಯಾದವೀಕಲಹವಾಗಬಹುದು ಮತ್ತು ಕೊನೆಯಲ್ಲಿ ಕಾಠಿಣ್ಯದ ಕ್ರಾಂತಿಯಲ್ಲಿ ಪರ್ಯವಸಾನ ಹೊಂದಬಹುದು.




## ಹಿಂದಿನ ಕತೆಗಳು

ಲೇಖಕರು: ಶ್ರೀ ಕಡೆಂಗೋಡ್ಲು ಶಂಕರ ಭಟ್ಟರು; ಪ್ರಕಾಶಕರು; ಯು. ಆರ್. ಶೆಣೈ ಎಂಡ್ ಸನ್ಸ್, ರಥಬೀದಿ, ಮಂಗಳೂರು- ೧೧೫ ಪುಟ ರೂ. ೧—೨—೦.

ಈ ಪುಸ್ತಕದಲ್ಲಿ ಶ್ರೀ ಭಟ್ಟರ ಆರು "ಹಿಂದಿನಕತೆಗಳು" ಸಂಗ್ರಹಿಸಲ್ಪಟ್ಟವೆ. ೧೯೨೮ ರಿಂದ ೧೯೩೮ ರ ವರೆಗಿನ "ಸಣ್ಣ ಕತೆಗಳ ಸ್ವರ್ಣ ಯುಗ"ದಲ್ಲಿ ಬರೆದ ಕತೆಗಳಿವು. ಕತೆಗಳನ್ನು ಬರೆದ ದಿನಾಂಕಗಳನ್ನು ಕೊಟ್ಟು ಲೇಖಕರ ವಿಮರ್ಶಕನ ಕೆಲಸವನ್ನು ಹಗುರು ಮಾಡಿದ್ದಾರೆ ಇದರಲ್ಲಿ ಬಂದ ಕಥೆಗಳೆಲ್ಲವೂ ವಾಚನೀಯವಾಗಿದ್ದರೂ ಲೇಖಕರ ಕಲೆ, ಕಾಲ ಕಳೆದಂತೆ ಪರಿಪಕ್ವವಾಗುತ್ತ ನಡೆದುದು ಸ್ಪಷ್ಟವಾಗಿ ಗೋಚರವಾಗುತ್ತದೆ. "ದೊಡ್ಡಣ್ಣ" ಈ ಸಂಗ್ರಹದ ಅತಿ ಪ್ರಾಚೀನ ಕಥೆಯಾಗಿದ್ದರೂ ಶ್ರೀ ಅ. ನ. ಕೃ. ಸಂಪಾದಿತ "ಕಾಮನಬಿಲ್ಲು—೧" ರಲ್ಲಿ ಸ್ಥಾನಪಡೆದು ಜನಪ್ರಿಯವಾಗಿದೆ. ಈ ವರೆಗೆ ಎಲ್ಲಿಯೂ ಪ್ರಕಟವಾಗದಿರುವ "ಕೈದಿ" ಮತ್ತು "ಹುಚ್ಚು ಹುಡುಗಿ" ಎಂಬೀ ಎರಡು ಕಥೆಗಳೂ (೧೯೩೮ ಮತ್ತು ೧೯೩೭ ರಲ್ಲಿ ಬರೆದವು) ಉಳಿದವುಗಳಿಗಿಂತ ಬೇರೆ ದಾರಿಯನ್ನು ತುಳಿದು ಭೌತಿಕಪ್ರಪಂಚದಿಂದ ಮಾನಸಿಕ ಪ್ರಪಂಚದ ಅಕಲ್ಪನೀಯ ವ್ಯಾಪಾರಗಳನ್ನು ಚಿತ್ರಿಸಿವೆ. ರೂಪದಲ್ಲೂ ರಸದಲ್ಲಿಯೂ ಅವು ಉಳಿದವುಗಳಿಗಿಂತ ಮೇಲ್ಮಟ್ಟದವು. ಸ್ವಾರ್ಥ ಜಗತ್ತಿನ ಕಾಯಿದೆ ಕಾನೂನುಗಳನ್ನು ತಿರಸ್ಕಾರ ದೃಷ್ಟಿಯಿಂದ ನೋಡಿ ತನ್ನದೇ ಕಲ್ಪನೆಯ ಆದರ್ಶಕ್ಕಾಗಿ ತಾನು ಮಾಡದ ಅಪರಾಧಕ್ಕೆ ಶಿಕ್ಷೆಯನ್ನನುಭವಿಸಲು ಸಿದ್ಧನಾದ ಆ "ಕೈದಿ" ನಮ್ಮ ಮನಸ್ಸಿನಲ್ಲಿ ಆ ಜೇಲರನ ಮಗಳು ಬರೆದ ಚಿತ್ರದಲ್ಲಿ ಹೇಗೋ ಹಾಗಿಯೆ ನಿಚ್ಚಳವಾಗಿ ಎದ್ದು ನಿಲ್ಲುತ್ತಾನೆ. ಇಂಗ್ಲಂಡಿನಲ್ಲಿದ್ದ ಸಮಯದಲ್ಲಿ ತಾರುಣ್ಯದ ಮರುಳಲ್ಲಿ ಪ್ರಭುಗಳು ಮದುವೆಯಾಗಿದ್ದ ಯುರೋಪಿಯನ್ ಹುಡುಗಿ ಅವರಿಗಾಗಿ ಮಾಡು ವತ್ಯಾಗದ ಅಪೂರ್ವತೆ "ಹುಚ್ಚು ಹುಡುಗಿ" ಯಲ್ಲಿ ಮನಸೋಲಿಸುತ್ತದೆ.

ಶೈಲಿಯಂತೆ ಶ್ರೀ ಭಟ್ಟರ ವಿಷಯದಲ್ಲಿಯೂ "ಇವರು ನಿಶ್ಚಿತವಾಗಿ ಕೀಳ್ಮಟ್ಟದ್ದೇನನ್ನೂ ಬರೆದಿಲ್ಲ" ಎಂದು ಧೈರ್ಯವಾಗಿ ಹೇಳಬಹುದು. ಅವರ "ಹಣ್ಣು ಕಾಯಿ" "ಧೂಮಕೇತು"ಗಳು ಹೊರಗೆ ಬಂದ ನಂತರ ಬಹುಕಾಲದ ವರೆಗೆ ಯಾವ ಪುಸ್ತಕವೂ ಬಾರದ್ದರಿಂದ ಅವರು ಉದೀಯಮಾನತೆಯಲ್ಲಿಯೇ ಅದೃಶ್ಯವಾದ ನಕ್ಷತ್ರಗಳಲ್ಲೊಂದಾಗುವರೋ ಎಂಬ ಸಂದೇಹ ಬಂದಿತ್ತು. ಆದರೆ ಇದೀಗ ಪ್ರಕಟವಾದ ಅವರ ಹೊಸ ಕಾದಂಬರಿ (ದೇವತಾ ಮನುಷ್ಯ) ಮತ್ತು ಪ್ರಸ್ತುತ ಸಂಗ್ರಹ ಆ ಭಯವನ್ನು ದೂರ ಮಾಡಿದೆ. "ಹಿಂದಿನ ಕತೆಗಳು" ಎಂಬ ಹೆಸರಿನಿಂದ "ಮುಂದಿನ ಕತೆಗಳು" ಇನ್ನೂ ಇವೆಯೆಂದು ಧ್ವನಿತವಾಗುತ್ತದೆ. ಅವು ಬೇಗನೆ ಹೊರಬರಲೆಂದು ಹಾರೈಸುತ್ತೇವೆ.

## ನಿರ್ಮಲಾ

ಮೂಲ (ಹಿಂದಿ) ಶ್ರೀ ಪ್ರೇಮಚಂದ, ಅನುವಾದ: ಶ್ರೀಮತಿ ಎಂ. ಎ. ಕುಪ್ಪಮ್ಮ ಮೈಸೂರು; ಪ್ರಕಾಶಕರು: ಲಲಿತ ಸಾಹಿತ್ಯ ಮಾಲೆ, ಧಾರವಾಡ. ೨೪೦ ಪುಟ ರೂ. ೩—೦—೦

"ಉಪನ್ಯಾಸ ಸಾಮ್ರಾಟ" ದಿವಂಗತ ಪ್ರೇಮಚಂದರ ದೊಡ್ಡ ಕೃತಿಗಳಲ್ಲಿ ಕನ್ನಡಕ್ಕಿಳಿದು ಬಂದುದು ಇದು ಎರಡನೆಯದು ಮತ್ತು ಶರಚ್ಚಂದ್ರರ ಅನುವಾದ ಯುಗದ ನಂತರ ಪ್ರೇಮಚಂದ ಅನುವಾದ ಯುಗ ಕಾಲಿಟ್ಟಂತೆ ತೋರುತ್ತದೆ. ವೃದ್ಧ ವಿವಾಹದ ದುಷ್ಪರಿಣಾಮಗಳನ್ನು ತೋರಿಸುವ "ಉದ್ದು ರಂತ" ಕಾದಂಬರಿಯೆಂದು ಹೇಳಬಹುದು. ವರದಕ್ಷಿಣೆಯ ಅಭಿಶಾಪದಿಂದ ವೃದ್ಧ ವಕೀಲರೊಬ್ಬರ ಕೈಹಿಡಿದ ನಿರ್ಮಲೆ ಮುಟ್ಟಿದ್ದೆಲ್ಲ ಮಣ್ಣಾಗಿ ಇಡಿ ಕುಟುಂಬವೆ ಸರ್ವನಾಶಕ್ಕೆ ಕಾರಣವಾದ ಹೃದಯವಿದ್ರಾವಕ ಕತೆಯನ್ನು ಲೇಖಕರು ಹೆಣೆದಿದ್ದಾರೆ. ಪ್ರೇಮಚಂದರು "ಪ್ರಗತಿಶೀಲ ಸಾಹಿತಿ" ಅವರು ಸಾಹಿತ್ಯವನ್ನು ಸಾಮಾಜಿಕ ದೋಷಗಳನ್ನು ಕತ್ತರಿಸಲು ಆಯುಧವಾಗಿ ಮಸೆಯಬೇಕೆನ್ನುವವರು. ಅದುದರಿಂದ ಅವರು ಲಲಿತ ಸಾಹಿತ್ಯದಲ್ಲಿಯೂ ಕಾಂತಾಸಮ್ಮಿತಿಯ ಬದಲು ಗುರೂಪದೇಶದ ಮಾರ್ಗಕ್ಕೆ ಇಳಿಯುವದುಂಟು. ಯುವತಿಯನ್ನು ಮದುವೆಯಾದ ಮುದುಕನ ಮತ್ತು ಮುದುಕನ ಕೈಹಿಡಿದ ಯುವತಿಯ ವಿಚಿತ್ರ ಮನೋವ್ಯಾಪಾರಗಳನ್ನು ಲೇಖಕರು ಅತ್ಯಂತ ಸಹಜವಾಗಿಯೂ ಪರಿಣಾಮಕರವಾಗಿಯೂ ಚಿತ್ರಿಸಿದ್ದಾರೆ. ನಿಜವಾಗಿ ಮುದಕ ಗಂಡನ ಯುವಕ ಪುತ್ರನ ಮರಣದ ವರೆಗೆ ೧೩೨ ಪುಟಗಳು ಅಸಾಧಾರಣ ಪರಿಣಾಮಕರವಾಗಿವೆ. ಆ ಮುಂದಿನ ೧೦೦ ಪುಟಗಳು ಮಾತ್ರ ಅಪೇಕ್ಷಿಸಿದಷ್ಟು ಸುಂದರವಾಗಿಲ್ಲ. ಕಥೆಯನ್ನು ಅದರ ತರ್ಕಸಿದ್ಧ ಮುಕ್ತಾಯಕ್ಕೆ ಮುಟ್ಟಿಸುವ ಅಥವಾ ವಿಷಯವನ್ನು ಇನ್ನಷ್ಟು ಮನದಟ್ಟು ಮಾಡಲೆಂದು ಮೊಳೆಯತಲೆಗೆ ಮತ್ತೆ ನಾಲ್ಕು ಕೊಡತಿಯೇಟುಗಳನ್ನು ಬಿಗಿಯುವ ಪ್ರಯತ್ನದಲ್ಲಿ ಲೇಖಕರು "ಉದ್ದಾಮ ದುರಂತ"ವೊಂದನ್ನು ಸೃಷ್ಟಿಸಲು ಸಮರ್ಥರಾಗಿದ್ದರೂ ಓದುಗನ ಮನಸ್ಸಿನಲ್ಲಿ ಆಯಾಸವನ್ನೂ ಕುತರ್ಕವನ್ನೂ ಹುಟ್ಟಿಸುತ್ತಾರೆ.

ಅನುವಾದ ಸರಳವಾಗಿದೆ.

## ಸದ್ಧರ್ಮಸಾರ

ಲೇ— ಶ್ರೀ ಬಸವಲಿಂಗಯ್ಯನವರು ಪಂಚಾಕ್ಷರಮಠ ಲಿಂಗಸೂಗುರು ಜಿ. ರಾಯಚೂರು ಬೆಲೆ ಒಂದಾಣೆ.

ಮಾನವರಿಗೆ ಅತ್ಯವಶ್ಯವಾಗಿ ಪಾಲಿಸತಕ್ಕ ಸದ್ಧರ್ಮ ಸಾರವನ್ನು ಇದರಲ್ಲಿ ಕೊಡಲಾಗಿದೆ. ಎಲ್ಲರೂ ವಿಶೇಷತಃ ಚಿಕ್ಕಮಕ್ಕಳು ಇದರ ಲಾಭ ಪಡೆಯಬೇಕಾಗಿ ಸೂಚನೆ.

## ಅಮರೇಶ್ವರ ಚರಿತ್ರೆ ಮತ್ತು ಕ್ಷೇತ್ರವರ್ಣನೆ

ಲೇಖಕ- ಹಾಗೂ ಪ್ರಕಾಶಕರು ಬಸವಲಿಂಗಯ್ಯನವರು ಪಂಚಾಕ್ಷರಿಮಠ ಲಿಂಗಸೂಗುರು ಬೆಲೆ ೫ ಆಣೆ.

ಯರಡೋಣಿ ಗ್ರಾಮದಲ್ಲಿ ಶಿವಭಕ್ತ ದಂಪತಿಗಳ ಇಚ್ಛೆಯನ್ನು ಪೂರೈಸುವದಕ್ಕಾಗಿ ಶಿವನು ಬಾಲಕನಾಗಿ ಅವತರಿಸಿ ಭಕ್ತೋದ್ಧಾರ ಮಾಡಿದುವನ್ನು ಇದರಲ್ಲಿ ವರ್ಣಿಸಲಾಗಿದೆ. ಅಮರೇಶ್ವರ ಕ್ಷೇತ್ರದ ವರ್ಣನೆಯೂ ಇದೆ.

## ಅಂದು ಇಂದಿನ ಹಳ್ಳಿಗಳು

ಬರೆಹಗಾರರು:- ಶ್ರೀ ಬಸವ ಅಡವೀಮಠ, ಬೆಲೆ ನಾಲ್ಕಾಣೆ.

ಅಡವೀಂದ್ರ ಗ್ರಂಥಮಾಲಾ ಕಲ್ಲೂರ ಜಿಲ್ಹಾ ರಾಯಚೂರು ಈ ಪುಸ್ತಕದಲ್ಲಿ ಅಂದಿನ ಮತ್ತು ಇಂದಿನ ಹಳ್ಳೀ ಜೀವನದ ಬಗ್ಗೆ ಸಂಕ್ಷೇಪತಃ ಬರೆಯಲಾಗಿದೆ. ಇಂಥ ಸಣ್ಣ ಪುಸ್ತಕಗಳನ್ನಲ್ಲದೆ ಈ ಗ್ರಂಥಮಾಲೆಯವರು ದೊಡ್ಡ ಪುಸ್ತಕಗಳನ್ನು ಪ್ರಸಿದ್ಧಿಸಬೇಕೆಂಬ ಆಶೆಯನ್ನು ಇಟ್ಟುಕೊಂಡಿದ್ದಾರೆ. ಆಶೆ ಕೈಗೂಡಲಿ; ಕನ್ನಡಿಗರು ಪ್ರೋತ್ಸಾಹಿಸಲಿ.

## ಗಾಂಧೀ ದಂಡು (ಮಕ್ಕಳ ಪುಸ್ತಕ)

ಬರೆದವರು:— ಪರಿಮಳ ಬೆಲೆ ೧॥ ಆಣೆ. ಪ್ರಕಾಶಕರು:- ಎಚ್. ಶ್ರೀನಿವಾಸ ಮೂರ್ತಿ ಬೆಂಗಳೂರ ನಗರ.

ಚಿಕ್ಕಮಕ್ಕಳಿಗೆ ಅಭಿನಯಿಸಲು ಬರುವಂತೆ ಇದನ್ನು ಬರೆಯಲಾಗಿದೆ. ತಾತ ಗಾಂಧೀಜಿಯವರ ವಿಚಾರದಲ್ಲಿಯೆ ಇದನ್ನು ರಚಿಸಲಾಗಿದೆ ಶಾಲಾ ಬಾಲಕರಿಗೆ ಇದು ಉಪಯುಕ್ತವಾಗಿದೆ.

## ಕರ್ನಾಟಕದ ಕಲಾಲರು

ಲೇ:— ಕಲಾಲ ಚೂಡಾಮಣಿರಾವ, ಪ್ರಕಾಶಕರು:- ಶೇಷಾಚಲ ಗ್ರಂಥಮಾಲೆ ಮದಿಹಾಳ ೩೦೦ ಧಾರವಾಡ, ಬೆಲೆ ೧ ರೂಪಾಯಿ.

ಕರ್ನಾಟಕದಲ್ಲಿಯ ಕಲಾಲ ಸಮಾಜ, ಅದರಲ್ಲಿ ಆಗತಕ್ಕ ಸಂಘಟನೆ ಸುಧಾರಣೆ ಮುಂತಾದ್ದನ್ನು ವಿವರಿಸಿದ್ದಾರೆ. ಹಿಂದೂ ಕಲಾಲರು ಮುಸ್ಲಿಂ (ಲಾಂಡೆ) ಕಲಾಲರು ಘಾಟ ಕಲಾಲರು ಚಾಕಣಾ ಕಲಾಲರು, ಇವರೆಲ್ಲ ಒಂದುಗೂಡಬೇಕೆಂಬ ಹೆಬ್ಬಯಕೆಯನ್ನು ಲೇಖಕರು ಇಟ್ಟುಕೊಂಡಿದ್ದಾರೆ ಮುಸ್ಲಿಂ ಕಲಾಲರು ಒತ್ತಾಯಕ್ಕೊಳಗಾದರೂ ಹಿಂದೂ ಧರ್ಮವನ್ನು ಬಿಡದವರಾಗಿದ್ದಾರೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಕಲಾಲ ಸಮಾಜದವರು ಈ ಪುಸ್ತಕವನ್ನು ಓದಿ ಸಮಾಜ ಸುಧಾರಣೆಗೆ ಅಣಿಯಾದರೆ ಲೇಖಕರ ಶ್ರಮಕ್ಕೆ ಫಲಸಿಕ್ಕಂತಾಗುವದು.

## Muslim Politics in India

by Binayendra Mohan Choudhari Publishers: Orient Book Co. Demi 8 104 pp. Rs. 3/-.

ಹಿಂದೀ ರಾಜಕಾರಣ ರಂಗದಲ್ಲಿ ಪ್ರತಿಗಾಮಿ ಸ್ವರೂಪವನ್ನು ತಳೆದು ನಿಂತಿರುವ ಮುಸ್ಲಿಂ ರಾಜಕಾರಣದ ವಿಕಾಸವೆಂತಾಯಿತೆಂಬುದನ್ನು ಶ್ರೀ ಚೌಧುರಿಯವರು ಇಲ್ಲಿ ಸಂಕ್ಷೇಪದಿಂದ ಆದರೂ ಸ್ಪಷ್ಟವಾಗಿ ವಿವರಿಸಿದ್ದಾರೆ. ೯ ಪ್ರಕರಣಗಳಲ್ಲಿ ಪಾಕಿಸ್ತಾನದಲ್ಲಿ ಪರ್ಯವಸಾನ ಹೊಂದಿದ ಮುಸ್ಲಿಂ ರಾಜಕಾರಣದಲ್ಲಿ ಬ್ರಿಟಿಶರ ಭಾಗವೆಷ್ಟು ನಮ್ಮ ರಾಜಕೀಯ ಪಕ್ಷಗಳ ತಪ್ಪು ತಡೆಗಳ ಫಲವೆಷ್ಟು ಹಾಗು ಮುಸ್ಲಿಂ ಜನತೆಯ ಸ್ವಭಾವದ ಅಂಶವೆಷ್ಟು ಎಂಬುದು ಓದುಗನಿಗೆ ಮನದಟ್ಟಾಗುವಂತೆ ಲೇಖಕರು ಬಹಳ ಸಾಮರ್ಥ್ಯದಿಂದ ವಿಷಯ ಪ್ರತಿಪಾದನ ಮಾಡಿದ್ದಾರೆ. ಪಾಕಿಸ್ತಾನ ಬೇಡಿಕೆಯ ಸಾಧುತ್ವವನ್ನು ಒಂದು ಪ್ರಕರಣದಲ್ಲಿ ಉಪಸ್ಥಿತಗೊಳಿಸಿ ಇನ್ನೊಂದರಲ್ಲಿ ಅದನ್ನು ಖಂಡಿಸಲಾಗಿದೆ. ಹಿಂದೀ ಇತಿಹಾಸದಲ್ಲಿ ಜಿನ್ನಾಸಾಹೇಬರ ಪರಿವರ್ತನೆಯಂಥ ಆಶ್ಚರ್ಯಕರ ಸಂಗತಿ ಬೇರೊಂದಿಲ್ಲ. ಅದರ ಕಾರಣಗಳನ್ನು ಲೇಖಕರು ಅಧಾರ ಸಹಿತ ತರ್ಕಿಸಿದ್ದಾರೆ. ಒಟ್ಟಿನ ಮೇಲೆ ಇದಿ ಪುಸ್ತಕ ಎಷ್ಟು ಸ್ವಾರಸ್ಯವೊ ಅಷ್ಟೇ ಬೋಧಪ್ರದವೂ ಆಗಿದೆ. ಅವಶ್ಯ ಸಂಗ್ರಾಹ್ಯವಾದ ಪುಸ್ತಕ.

## National Harmony

By Percival Spear, Oxford University Press Bombay. ಬೆಲೆ ೬ ಆಣೆ.

ದಿಲ್ಲಿ ಸ್ಟೀಫನ್ಸ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಸ್ಪಿಯರ ಸಾಹೇಬರು ಈ ಪುಸ್ತಿಕೆಯಲ್ಲಿ ಹಿಂದೀ ಸ್ವಾತಂತ್ರ್ಯವನ್ನು ಎಂತು ಪಡೆಯಬೇಕೆಂಬುದನ್ನು ವಿವೇಚಿಸುತ್ತ ಹಿಂದುಸ್ತಾನ ಮತ್ತು ಪಾಕಿಸ್ತಾನವೆಂಬ ಎರಡು ವಿಭಾಗಗಳನ್ನು ಮಾಡಬೇಕೆಂದೂ ಇವೆರಡೂ ವಿಭಾಗಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಬಿಡಿಸುವದಕ್ಕಾಗಿ ಸಂಯುಕ್ತ ಸರಕಾರವೊಂದನ್ನು ಸ್ಥಾಪಿಸಬಹುದೆಂದೂ ಪ್ರತಿಪಾದಿಸಿರುತ್ತಾರೆ. ಹಿಂದುಸ್ತಾನದ ಹಿಂದೂ ಮುಸಲ್ಮಾನ ಪ್ರಶ್ನೆಯನ್ನು ಹೆಚ್ಚು ಜಟಿಲ ಮಾಡುವದಕ್ಕೆ ಇಂಥ ಪುಸ್ತಕಗಳೂ ಕೆಲಮಟ್ಟಿಗೆ ಕಾರಣವಾಗುತ್ತವೆಂದು ಬೇರೆ ಹೇಳಬೇಕಿಲ್ಲ. ಪರಕೀಯರ ಈ ಬಗೆಯ ಪ್ರಚಾರ ಮತ್ತು ಸ್ವಾರ್ಥಕ್ಕಾಗಿ ಈ ಸಮಸ್ಯೆಯನ್ನು ಹೆಚ್ಚು ಜಟಿಲಮಾಡುವ ಮನೋವೃತ್ತಿಯಿಂದಲೆ ಪಾಕಿಸ್ತಾನ ಭೂತ ಎದ್ದಿದೆಂಬುದು ನಿರ್ವಿವಾದ. ಲೇಖಕರು ಈ ಸಂಬಂಧದಲ್ಲಿ ಮಾಡಿದ ವಿಚಾರಗಳು ವಸ್ತುಸ್ಥಿತಿಗೆ ಒಗ್ಗವೆಂದು ಹೇಳಬೇಕಾಗುವದು. ಪಾಕಿಸ್ತಾನ ಕೊಟ್ಟುಬಿಟ್ಟರೆ ಎಲ್ಲವೂ ಸುಲಭವಾಗುವದೆಂದು ಹೇಳಲಿಕ್ಕೆ ಬರುವದಿಲ್ಲ. ಉಳಿದ ಅನೇಕ ಪ್ರಶ್ನೆಗಳು ಏಳುವವು. ಅವನ್ನೆಲ್ಲ ಬಿಡಿಸುವದು ಬಹು ಕಠಿನ ಹೋಗುವದು. ಅದುದರಿಂದ ಹಿಂದುಸ್ತಾನವನ್ನು ಅಖಂಡವಾಗಿಟ್ಟುಕೊಂಡೇ ಹಿಂದಿ ಸ್ವಾತಂತ್ರ್ಯದ ಪ್ರಶ್ನೆ ಬಿಡಿಸುವದು ಉಚಿತವಾಗಿದೆ.

## The Chinese Peasant

Chen Han—Seng Oxford University Press Bombay ಬೆಲೆ ೬ ಆಣೆ.

ಪೆಕಿಂಗ ನ್ಯಾಶನಲ್ ಯುನಿವರ್ಸಿಟಿಯಲ್ಲಿ ಪ್ರಾಧ್ಯಾಪಕರಾಗಿದ್ದ ಈ ಲೇಖಕರು ಚೀನದಲ್ಲಿಯ ಒಕ್ಕಲಿಗರ ಸಮಸ್ಯೆಯನ್ನು ಸ್ವಲ್ಪದರಲ್ಲಿಯೆ ತಿಳಿಯಾಗಿ ವಿವರಿಸಿದ್ದಾರೆ. ಹಿಂದುಸ್ತಾನದಲ್ಲಿಯಂತೆ ಅದೇಕೆ ಅದಕ್ಕೂ ಹೆಚ್ಚು ಪ್ರಮಾಣದಲ್ಲಿ ಚೀನದಲ್ಲಿ ಒಕ್ಕಲಿಗರು ಇರುವರು. ಅವರ ಸಮಸ್ಯೆ ಜಟಿಲವಾಗಿದೆ. ಪ್ರಸ್ತುತ ಲೇಖಕರು ಅದನ್ನು ಪರ್ಯಾಲೋಚಿಸಿ ಉಪಾಯಗಳನ್ನೂ ಸೂಚಿಸಿದ್ದಾರೆ. ಚೀನದಲ್ಲಿಯ ಒಕ್ಕಲಿಗರ ಸಮಸ್ಯೆಯನ್ನು ತಿಳಿಯಬಯಸುವವರು ಅವಶ್ಯವಾಗಿ ಈ ಪುಸ್ತಿಕೆಯನ್ನು ಓದಬೇಕು. ಇದರಿಂದ ಹಿಂದುಸ್ತಾನದಲ್ಲಿಯ ಒಕ್ಕಲಿಗರ ಸಮಸ್ಯೆಯನ್ನು ತುಲನಾತ್ಮಕ ದೃಷ್ಟಿಯಿಂದ ವಿವೇಚಿಸಲು ಅನುಕೂಲವಾಗುವದು.

**Vision** ಆನಂದಾಶ್ರಮದ ಮಾಸಪತ್ರಿಕೆ, ಮತ್ತು ರಾಮನಗರದ ಶ್ರೀ ಕೃಷ್ಣ ವಿದ್ಯಾಲಯದ ನಾಲ್ಕನೆ ವಾರ್ಷಿಕ ವರದಿಯನ್ನು ಸ್ವಾಗತಿಸುತ್ತೇವೆ.





## ಬ್ರಿಟನ್ ಮತ್ತು ಹಿಂದುಸ್ತಾನ

ಹಿಂದುಸ್ತಾನವು ಸ್ವಾತಂತ್ರ್ಯದತ್ತ ಭರದಿಂದ ಸಾಗಹತ್ತಿರುವುದನ್ನು ನೋಡಿ ಬ್ರಿಟಿಶರಿಗೆ ವಿಶೇಷತಃ ಬ್ರಿಟಿಶ್ ವ್ಯಾಪಾರಸ್ಥರಿಗೆ ಮುಂದೆ ತಮ್ಮ ಗತಿಯೇನೆಂಬ ಬಗ್ಗೆ ವಿವಂಚನೆಯುಂಟಾಗಹತ್ತಿದೆ. ಭಾರತದ ಈ ಸ್ವಾತಂತ್ರ್ಯದ ಪ್ರಗತಿಪಥದಲ್ಲಿ ಅಡ್ಡಗಾಲು ಹೊಡೆಯಲೂ ಅವರು ಸಮಯ ಸಾಧಿಸುವುದುಂಟು. ಬ್ರಿಟಿಶ್‌ರು ಭಾರತಕ್ಕೆ ವ್ಯಾಪಾರಕ್ಕೆಂಬಂದು ಈ ರಾಷ್ಟ್ರವನ್ನೆ ಕಬಳಿಸಿಕೊಂಡು ಅದರ ಆರ್ಥಿಕ ರಾಜಕೀಯ ಶೋಷಣೆ ಮಾಡಿದ್ದು ಸರ್ವಶ್ರುತ. ಇನ್ನು ಮುಂದೆ ಇದು ನಡೆಯಲಾರದೆಂಬುದು ಸುಸ್ಪಷ್ಟ. ಆದರೆ ಬ್ರಿಟಿಶ್ ವ್ಯಾಪಾರಸ್ಥರು ಹಿಂದುಸ್ತಾನದ ಉದ್ಯೋಗ ವ್ಯಾಪಾರಗಳನ್ನು ಸುಲಿಯುವ ಧೋರಣ ವಹಿಸದೆ ಪ್ರಾಮಾಣಿಕ ರೀತಿಯಿಂದ ತಮ್ಮ ವ್ಯಾಪಾರ ನಡೆಸಿದರೆ ಈಗಲೂ ಸ್ವತಂತ್ರ ಹಿಂದುಸ್ತಾನದಲ್ಲಿಯೂ ಅವರಿಗೆ ಅವಕಾಶವಿದೆ. ಹಿಂದುಸ್ತಾನ ನಡುಗಾಲ ಸರಕಾರದ ಉಪಾಧ್ಯಕ್ಷ ಪಂಡಿತ ಜವಾಹರಲಾಲರು ಕಲಕತ್ತೆಯ ಸಂಯುಕ್ತ ವಣಿಕ್ಸಂಘದ ಮುಖ್ಯ ಅತಿಥಿಗಳೆಂದು ಮಾಡಿದ ಭಾಷಣದಲ್ಲಿ ಬ್ರಿಟನ್ ಮತ್ತು ಹಿಂದುಸ್ತಾನದ ಈ ಮಧುರ ಸಂಬಂಧವನ್ನು ಬಿಚ್ಚು ಮಾತುಗಳಲ್ಲಿ ಹೇಳಿರುವರು. ಸಂಯುಕ್ತ ವಣಿಕ್ ಸಂಘದ ವಾರ್ಷಿಕ ಸಭೆಯಲ್ಲಿ ಭಾಷಣಮಾಡುವ ಸನ್ಮಾನ ಪ್ರತಿ ವರ್ಷ ವ್ಹೈಸರಾಯರಿಗೆ ಸಲ್ಲುತಿದ್ದಿತು. ಈ ವರುಷ ಅದು ನಡುಗಾಲ ಸರಕಾರದ ಉಪಾಧ್ಯಕ್ಷರಿಗೆ ದೊರೆತುದು ಬದಲಾದ ಪರಿಸ್ಥಿತಿಯ ದ್ಯೋತಕವೆಂದು ಹೇಳಬಹುದು. ಹಿಂದೀ ಮುಂದಾಳುವೊಬ್ಬ ಈ ಸಂಯುಕ್ತ ಸಭೆಯಲ್ಲಿ ಮಾತಾಡಿದ್ದು ಇದೆ ಮೊದಲ ಸಲ. ಈ ಸಮಯದ ಸಂಧಿ ಸಾಧಿಸಿ ಪಂಡಿತ ಜವಾಹರಲಾಲರೂ ತಕ್ಕ ಭಾಷಣ ಮಾಡಿದರು. ನೂರೈವತ್ತು ವರ್ಷಗಳಿಗಿಂತ ಹೆಚ್ಚು ಕಾಲದಿಂದ ನಡೆದುಬಂದ ಈ ಸಂಬಂಧದ ದೃಶ್ಯಾದೃಶ್ಯ ಎಳೆಗಳು ಎರಡೂ ರಾಷ್ಟ್ರಗಳಲ್ಲಿ ಸಿಕ್ಕುಕೊಂಡಿದ್ದು ಅವುಗಳ ಸದುಪಯೋಗ ಮಾಡುವದು ಕರ್ತವ್ಯವಾಗಿದೆ. ಸ್ವತಂತ್ರ ಹಿಂದುಸ್ತಾನ ಬ್ರಿಟಿಶ ವ್ಯಾಪಾರಿಗಳ ಹಿಂದಿನ ಪಂಕ್ತಿ ಪ್ರಪಂಚ, ಹಿಂದೀ ಉದ್ಯೋಗ ಧಂದೆಗಳನ್ನು ಮುರಿಬಡೆದು ಬ್ರಿಟಿಶ್ ಸಾಮ್ರಾಜ್ಯ ವಸ್ತುಗಳ ಪ್ರಸಾರ ಮಾಡಿದ್ದು ಮೊದಲಾದವುಗಳನ್ನು ಮರೆತು ಉಚಿತ ರೀತಿಯಲ್ಲಿ ವರ್ತಿಸುವುದೆಂದು ಪಂಡಿತರು ಆಶ್ವಾಸಿಸಿದ್ದಾರೆ. ಆದರೆ ಬ್ರಿಟಿಶ್ ವ್ಯಾಪಾರಸ್ಥರೂ ಇನ್ನು ಮುಂದೆ ತಮ್ಮ ಧೋರಣದಲ್ಲಿ ಅವಶ್ಯ ಮಾರ್ಪಾಡು ಮಾಡಿಕೊಳ್ಳಬೇಕು. ಬ್ರಿಟಿಶ್ ಸಾಮ್ರಾಜ್ಯ ವಿಸ್ತರಣದ ಅರ್ಥಶಾಸ್ತ್ರ ಧೋರಣವು ಇನ್ನು ಮುಂದೆ ಹಿಂದುಸ್ತಾನದಲ್ಲಿ ನಡೆಯದೆಂಬುದನ್ನು ಬ್ರಿಟಿಶ್ ವ್ಯಾಪಾರಸ್ಥರು ಈಗಲೆ ಮನಗಾಣಬೇಕು. ಜವಳಿ ಉದ್ಯೋಗದಲ್ಲಿ ಬ್ರಿಟಿಶ್ ವ್ಯಾಪಾರಿಗಳು ಕೈಹಾಕದಿದ್ದರೆ ಹಿಂದುಸ್ತಾನದಲ್ಲಿ ಸಿದ್ಧವಾಗದ ಉಳಿದೆಲ್ಲ ವಸ್ತುಗಳನ್ನು ಬ್ರಿಟನ್‌ದಿಂದಲೆ ಕೊಂಡುಕೊಳ್ಳುವ ಆಶ್ವಾಸನ ಕೊಡುತ್ತೇವೆಂದು ಮಹಾತ್ಮಾ ಗಾಂಧಿಯವರು ಹಿಂದೆಯೆ ಹೇಳಿದ್ದನ್ನು ಈ ಸಮಯದಲ್ಲಿ ಉಲ್ಲೇಖಿಸಬಹುದಾಗಿದೆ. ಬ್ರಿಟಿಶ್ ವ್ಯಾಪಾರಸ್ಥರು ಸೂಕ್ಷ್ಮ ರೀತಿಯಿಂದ ಪರಿಸ್ಥಿತಿಯನ್ನು ವಿಮರ್ಶಿಸಿಕೊಂಡು ಹಿಂದುಸ್ತಾನಕ್ಕೂ ತಮಗೂ ಕೂಡಿಯೆ ಹಿತವಾಗುವಂಥ ವ್ಯಾಪಾರ ಧೋರಣವನ್ನು ಅನುಸರಿಸುವುದು ಇಷ್ಟವಾಗಿದೆ.

## ಸರಕಾರ ಮತ್ತು ವ್ಯಾಪಾರ

ಪಂಡಿತ ಜವಾಹರಲಾಲರು ಇದೇ ಸಂದರ್ಭದಲ್ಲಿ ವ್ಯಾಪಾರದಲ್ಲಿ ಸರಕಾರದ ಸಂಬಂಧವೆಷ್ಟರಮಟ್ಟಿಗಿದೆ; ಇರತಕ್ಕದ್ದು ಎಂಬುದನ್ನೂ ವಿವರಿಸಿದರು. ಸಂಯುಕ್ತ ವಾಣಿಜ್ಯ ಸಂಘದ ಅಧ್ಯಕ್ಷರಾದವರು ಸರಕಾರವು ವ್ಯಾಪಾರದಲ್ಲಿ ಕೈಹಾಕುತಿರುವದನ್ನು ಆಕ್ಷೇಪಿಸಿದುದಕ್ಕೆ ಉತ್ತರಕೊಡುತ್ತ ಪಂಡಿತರು ಕೆಲ ಮಾತುಗಳನ್ನು ಹೇಳಿದರು. ಹಿಂದುಸ್ತಾನ ಸರಕಾರದ ವ್ಯಾಪಾರ ಧೋರಣವು ದೇಶದ ಉದ್ಯೋಗಾಭಿವೃದ್ಧಿಯ ಧ್ಯೇಯದಿಂದಲೆ ಸಾಗತಕ್ಕದ್ದು ಅವಶ್ಯವಾಗಿರುವಂತೆ ಒಕ್ಕಲತನದ ನಾಡಾದ ಈ ದೇಶದ ಜನಸಾಮಾನ್ಯರ ಹಿತವನ್ನು ಲಕ್ಷಿಸಿಯೂ ಸಾಗತಕ್ಕದ್ದು ಅನಿವಾರ್ಯವಾಗಿದೆ. ಈ ಜನಸಾಮಾನ್ಯರ ಹಿತವನ್ನು ಅಲಕ್ಷಿಸಿ ವ್ಯಾಪಾರಸ್ಥರು ಮನಬಂದಂತೆ ತಮ್ಮ ವ್ಯಾಪಾರ ನಡೆಸಹತ್ತಿದರೆ ಸರಕಾರ ಅದು ರಾಷ್ಟ್ರೀಯವಿರಲಿ, ಬೇರೆ ಸರಕಾರವಿರಲಿ ಸಹಿಸದು. ಈ ಮಾತನ್ನು ವಿವರಿಸುವಾಗ ಪಂಡಿತರು ವ್ಯಾಪಾರ ವ್ಯವಹಾರದಲ್ಲಿ ಸರಕಾರ ಕೈಹಾಕದಿರುವದು ಅಶಕ್ಯ. ಹಿಂದೆಯೂ ಸರಕಾರ ಅದರಲ್ಲಿ ಕೈಹಾಕಿದೆ ಮುಂದೆಯೂ ಹಾಕುತ್ತ ಹೋಗುವದು, ಮೊದಲಿಗಿಂತ ಹೆಚ್ಚಿಗೇ ಹಾಕುತ್ತ ಹೋಗುವದು. ಸಮಾಜ ಹಿತದೃಷ್ಟಿಯಿಂದ ಜಗತ್ತಿನ ಎಲ್ಲ ಸರಕಾರಗಳು ಇಂದು ವ್ಯಾಪಾರದಲ್ಲಿ ಕೈಹಾಕುತಿರುವದನ್ನು ನಾವು ನೋಡುತ್ತೇವೆ. ಈ ಪ್ರವೃತ್ತಿ ಹೆಚ್ಚಾಗಿ ಕಂಡು ಬರುವದಕ್ಕೆ ಪ್ರಭುತ್ವವು ಸಮಾಜದ ಆಕೃತಿಯಿದ್ದುದೆ ಕಾರಣವೆಂದು ಅವರು ಹೇಳಿದರು. ಹಿಂದುಸ್ತಾನ ಸ್ವತಂತ್ರವಾಗಿ ರಾಷ್ಟ್ರೀಕರಣ ಧೋರಣವನ್ನು ವ್ಯಾಪಾರದಲ್ಲಿಯೂ ವಹಿಸಿದರೆ ತಮ್ಮ ಗತಿಯೇನೆಂದು ಬ್ರಿಟಿಶ್ ಬಂಡವಲುದಾರರಿಗೆ ಹೃದ್ರೋಗ ಹತ್ತಿರುವದರಿಂದ ಸರಕಾರ ವ್ಯಾಪಾರದಲ್ಲಿ ಕೈಹಾಕುವದು ಬೇಡ ಎಂದು ಅವರು ವಾದಿಸಹತ್ತಿರುವರು. ಆದರೆ ಇದು ಸಮಂಜಸವಾದವಲ್ಲೆಂಬುದು ಸ್ಪಷ್ಟವಿದೆ. ಈ ವರೆಗೆ ಬ್ರಿಟಿಶ್ ಸರಕಾರದವರು ಬ್ರಿಟಿಶ್ ಬಂಡವಲುದಾರರಿಗೆ ಬೇಕಾದಷ್ಟು ವ್ಯಾಪಾರ ಸೌಕರ್ಯಗಳನ್ನು ಕೊಟ್ಟೂ ಇಲ್ಲಿನ ಉದ್ಯೋಗ ಧಂದೆ ವ್ಯಾಪಾರವೆಲ್ಲ ಹಾಳಾಗಲು ಅವಕಾಶವೊದಗಿಸುವಾಗ ಈ ವ್ಯಾಪಾರಸ್ಥರಿಗೆ ಸರಕಾರದ ಹಸ್ತಕ್ಷೇಪವೆನಿಸಲಿಲ್ಲ. ಈಗ ಮಾತ್ರ ಎನಿಸಹತ್ತಿದೆಂಬದರ ರಹಸ್ಯ ತಿಳಿದುಕೊಳ್ಳಲು ವಿಶೇಷ ಪ್ರಯತ್ನಿಸಬೇಕಿಲ್ಲ. ನಾಡಿನ ಬೆನ್ನೆಲುಬಿನಂತಿರುವ ಒಕ್ಕಲಗರಿಗೆ ಅವರ ಪರಿಶ್ರಮಕ್ಕೆ ತಕ್ಕ ಪ್ರತಿಫಲ ದೊರೆವಂತೆ ಅವರ ಬೆಳೆಗಳಿಗೆ ಧಾರಣೆ ಗೊತ್ತುಪಡಿಸುವದೂ ಅವಶ್ಯವೆಂದು ಜವಾಹರರು ಸ್ಪಷ್ಟಪಡಿಸಿರುವರು. ಯುದ್ಧ ಕಾಲದಲ್ಲಿ ಒಕ್ಕಲಿಗರ ಮಾಲ ಧಾರಣೆ ಕೆಲಮಟ್ಟಿಗೆ ಏರಿದ್ದರಿಂದ ಅವರ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಿದೆ. ಆದರೆ ಇಷ್ಟರಲ್ಲಿಯೆ ಆ ಧಾರಣೆಗಳನ್ನಿಳಿಸಬೇಕೆಂದು ಕೆಲರು ಪ್ರತಿಪಾದಿಸುವದು ಸರಿಯಲ್ಲೆಂದೂ ಅವರು ಹೇಳಿರುವರು. ನಾಡಿನ ಎಲ್ಲ ಜನರಿಗೆ ಹಿತವಾಗುವ ದೃಷ್ಟಿಯಲ್ಲಿ ಸರಕಾರ ನಡೆಯಬೇಕಾದುದು ಅದರ ಕರ್ತವ್ಯ ಪ್ರಥಮ ರಾಷ್ಟ್ರೀಯ ಸರಕಾರ ಆ ಧೋರಣದಿಂದ ಸಾಗುತಿದೆಂಬುದು ಅಭಿನಂದನೀಯವಾಗಿದೆ.

## ಪದವೀಧರ ತರುಣರ ಕರ್ತವ್ಯ

ಹಿಂದುಸ್ತಾನ ಸದ್ಯಕ್ಕೆ ಕ್ರಾಂತಿ ಪರಿಸ್ಥಿತಿಯಲ್ಲಿದೆ. ಪರ ದಾಸ್ಯದ ಸಂಬಂಧವನ್ನು ಹರಿದೊಗೆದು ಸ್ವಾತಂತ್ರ್ಯ ಸಂಪಾದನೆಯ ಪ್ರಯತ್ನದಲ್ಲಿ ತೊಡಗಿದೆ. ಈ ಸಮಯದಲ್ಲಿ ಪದವೀಧರ ತರುಣರು ಕರ್ತವ್ಯವನ್ನು ತಿಳಿದುಕೊಂಡು ಕಾರ್ಯಪ್ರವೃತ್ತರಾಗಬೇಕಾಗಿದೆ. ಈ ಸಂಬಂಧದಲ್ಲಿ ಹಿಂದುಸ್ತಾನದ ಪ್ರಮುಖರಿಬ್ಬರು ಪದವೀದಾನ ಭಾಷಣಮಾಡಿ ಈ ಕರ್ತವ್ಯದ ಅರಿವನ್ನು ಮಾಡಿಕೊಟ್ಟಿರುವರು ನಡುಗಾಲ ಸರಕಾರದ ಆಹಾರ ಮಂತ್ರಿಗಳೂ ಕಾಂಗ್ರೆಸ್ಸಿನ ಮಾನ್ಯ ಧುರೀಣರೂ ಆಗಿರುವ ಡಾ. ರಾಜೇಂದ್ರ ಪ್ರಸಾದರು ಕಾಶಿಯಲ್ಲಿಯ ಹಿಂದೂ ವಿಶ್ವವಿದ್ಯಾಲಯದ ಪದವೀದಾನ ಭಾಷಣ ಮಾಡಿದರು. ಮದ್ರಾಸದ ಮುಖ್ಯಮಂತ್ರಿಗಳಾದ ಶ್ರೀ ಪ್ರಕಾಶಂರು ಆಂಧ್ರ ವಿಶ್ವವಿದ್ಯಾಲಯದ ಪದವೀದಾನ ಭಾಷಣ ಮಾಡಿದರು. ಇವರಡು ಭಾಷಣಗಳನ್ನು ಸುಶಿಕ್ಷಿತ ತರುಣರು ಚೆನ್ನಾಗಿ ಮನನಮಾಡಿಕೊಂಡು ಕಾರ್ಯಪ್ರವೃತ್ತರಾಗಬೇಕು. ಹಿಂದುಸ್ತಾನ ಸದ್ಯಕ್ಕೆ ಅತ್ಯಂತ ಕಠಿನ ಕಾಲವನ್ನು ಕ್ರಮಿಸಬೇಕಾಗಿದೆ. ಈ ಸಮಯದಲ್ಲಿ ನಾವು ಎಂಥ ಪ್ರಶ್ನೆಗಳನ್ನೆದುರಿಸಬೇಕಾಗುವದೆಂಬುದು ತಿಳಿಯದು. ಆದರೆ ಏನೇ ಆದರೂ ಎಂಥ ಗಂಡಾಂತವನ್ನೆದುರಿಸುವ ಪ್ರಸಂಗ ಬಂದರೂ ನಾವು ಅದಕ್ಕೆ ಸಿದ್ಧರಾಗಿರಬೇಕು. ನೀವೆಲ್ಲ ನಿಮ್ಮ ಹೊಣೆ ಮತ್ತು ಕರ್ತವ್ಯವಹಿಸಲು ಸಿದ್ಧರಾಗಬೇಕು. ಈ ಮೊದಲು ನಾವು ಹೋರಾಟ ಸಾಗಿಸಿದ್ದು ನಿಜ. ಆದರೆ ಇಂದು ಮುಂದಿನ ಹೋರಾಟದ ಸ್ವರೂಪ ಬೇರೆ ಬಗೆಯದಾಗುವುದು. ಅದಕ್ಕಾಗಿ ನಾವೆಲ್ಲ ವಿಧಾಯಕ ಕಲ್ಪಕಶಕ್ತಿಯನ್ನು ಪಯೋಗಿಸಿ ಕಾರ್ಯಪ್ರವೃತ್ತರಾಗಬೇಕು. ಪರಕೀಯ ಆಡಳಿತವನ್ನು ಹಾರಿಬಿಡುವದಷ್ಟೇ ನಮ್ಮ ಧ್ಯೇಯವಲ್ಲ. ನಮಗೆ ನಿಜವಾದ ಸ್ವಾತಂತ್ರ್ಯಬೇಕು; ಸ್ತ್ರೀ ಪುರುಷರಿಗೆಲ್ಲ ನಿಜ ಸ್ವಾತಂತ್ರ್ಯಬೇಕು; ಬಡವರಿಗೂ ಸ್ವಾತಂತ್ರ್ಯಬೇಕು. ಬಲ್ಲಿದರಿಗೂ ಬೇಕು, ಹಿಂದುಳಿದವರಿಗೂ ಬೇಕು ಅನೇಕ ವರುಷಗಳಿಂದ ಹತ್ತಿಕ್ಕಲ್ಪಟ್ಟ ಜನರಿಗೂ ಸ್ವಾತಂತ್ರ್ಯ ಬೇಕು. ಇದನ್ನೆಲ್ಲ ತಿಳಿದುಕೊಂಡು ನೀವೆಲ್ಲ ನಿಮ್ಮ ಮೇಲೆ ಬಿದ್ದಿರುವ ಕಾರ್ಯವನ್ನು ನಿರ್ವಹಿಸಿಕೊಳ್ಳಲಣಿಯಾಗಬೇಕೆಂದು ಮುಂತಾಗಿ ರಾಜೇಂದ್ರ ಬಾಬುಗಳ ಹೇಳಿರುವರು. ಇಡೀ ದೇಶದ ಮತ್ತು ಮಾನವ್ಯದ ವಿಶಾಲ ಅಂತರಾಳವನ್ನು ಉಲ್ಲೇಖಿಸುವಂಥ ಪರಿಪೂರ್ಣ ಸಜ್ಜನರನ್ನು ವಿಶ್ವವಿದ್ಯಾಲಯಗಳು ಸಿದ್ಧಪಡಿಸಬೇಕು. ಎರಡನೆಯವರ ಅಭಿಪ್ರಾಯಗಳನ್ನು ಸಹಿಷ್ಣುತಾಭಾವದಿಂದ ನೋಡುವ ದೃಷ್ಟಿ ಅವರದಾಗಿರಬೇಕು. ಜನಸಾಮಾನ್ಯರ ದುಃಖನಿವಾರಣೆಗಾಗಿ ತಮ್ಮ ಹಿತಸಂಬಂಧಗಳನ್ನು ಹೊರದೂಡಲು ಅವರು ಸಿದ್ಧರಾಗಬೇಕು ಎಂದು ಮುಂತಾಗಿ ಪ್ರಕಾಶಂರು ಉಪದೇಶಿಸಿರುವರು. ವಿದ್ಯಾರ್ಥಿಗಳು ಕೇವಲ ಪುಸ್ತಕದ ಹುಳಗಳಾಗದೆ ದೇಶದ ರಾಜಕೀಯ ಅಭಿವೃದ್ಧಿಯಲ್ಲಿ ಭಾಗವಹಿಸಬೇಕೆಂದೂ ಹೇಳಿದರು. ಹಿಂದುಸ್ತಾನಿಯೆ ಹಿಂದುಸ್ತಾನದ ಭಾಷೆಯಾದ್ದರಿಂದ ವಿಶ್ವವಿದ್ಯಾಲಯದ ಶಿಕ್ಷಣ ಹಿಂದಿಯಲ್ಲೇ ಆಗುವದುಚಿತವೆಂದೂ ನಾಗಪುರ ವಿಶ್ವವಿದ್ಯಾಲಯದವರು ಇದರಲ್ಲಿ ಪ್ರಗತಿ ಪಡೆದಿರುವರೆಂದೂ ರಾಜೇಂದ್ರ ಬಾಬುಗಳು ಹೇಳಿದರು. ಮೇಲೆ ಹೇಳಿದಂತೆ ಸುಶಿಕ್ಷಿತ ಪದವೀಧರರು ತಮ್ಮ ಶಿಕ್ಷಣ ಮುಗಿದ ಬಳಿಕ ಕೇವಲ ಹಣಗಳಿಸುವಲ್ಲಿಯೆ ನಿರತರಾಗದೆ ದೇಶದ ಅಭ್ಯುದಯದ ಕಡೆಗೂ ಗಮನಿಸಬೇಕು. ಪರತಂತ್ರ ಹಿಂದುಸ್ತಾನದಲ್ಲಿಯಂತೂ ಇದು ಹೆಚ್ಚು ಅವಶ್ಯವಾಗಿದೆಂದು ಬೇರೆ ಹೇಳಬೇಕಿಲ್ಲ.

## ಘಟನಾ ಸಮಿತಿಯ ಮುನ್ನಡೆ

ದಿಸೆಂಬರ ೯ ನೇ ತಾರೀಕಿನಿಂದ ಪ್ರಾರಂಭವಾದ ಘಟನಾ ಸಮಿತಿ ಪಂಡಿತ ಜವಾಹರಲಾಲರ ಗೊತ್ತುವಳಿಯ ಚರ್ಚೆಯಲ್ಲಿ ತೊಡಗಿದೆ. ಈ ಗೊತ್ತುವಳಿಯನ್ನು ಸದ್ಯಕ್ಕೆ ಸ್ವೀಕರಿಸುವದು ಬೇಡ. ಮುಸ್ಲಿಂ ಲೀಗು ಮತ್ತು ಸಂಸ್ಥಾನ ಪ್ರತಿನಿಧಿಗಳು ಬಂದ ಬಳಿಕ ಇದನ್ನು ಸ್ವೀಕರಿಸುವಾ ಎಂಬುದೆ ಜಯಕರರ ವಾದವಾಗಿದೆ. ಇದಕ್ಕೊಪ್ಪಿದರೆ ಅನಿಯಮಿತ ಅವಧಿಯ ವರೆಗೆ ಇದರ ಚರ್ಚೆಯನ್ನು ಮುಂದರಿಸಿದಂತೆಯೆ ಎಂದು ಬೇರೆ ಹೇಳಬೇಕಿಲ್ಲ. ಏಕೆಂದರೆ ಮುಸ್ಲಿಂ ಲೀಗಿನವರು ಎಂದು ಘಟನಾ ಸಮಿತಿಯನ್ನು ಸೇರುವರೆಂಬುದು ನಿಯಮವಿಲ್ಲ. ಬ್ರಿಟಿಶ್ ಸರಕಾರದವರು ಗುಂಪುಗಳ ಸಂಬಂಧದಲ್ಲಿ ಮಾಡಿದ ಅರ್ಥವಿವರಣೆಯನ್ನು ಕಾಂಗ್ರೆಸ್ಸು ನಿಃಸಂದಿಗ್ಧ ರೀತಿಯಲ್ಲಿ ಸ್ವೀಕರಿಸಿದ ನಂತರ ಘಟನಾ ಸಮಿತಿಯಲ್ಲಿ ಸೇರಬೇಕೊ ಹೇಗೆಂಬುವನ್ನು ವಿಚಾರಿಸಲು 'ಬ್ಯಾ. ಜಿನ್ನಾ ಸಾಹೇಬರು ತಮ್ಮ ಕಾರ್ಯಕಾರಿ ಮಂಡಳದ ಸಭೆ ಕರೆಯುವರಂತೆ. ಅದರ ನಿರ್ಣಯವೇನಾಗುವದೊ ತಿಳಿದಿಲ್ಲ. ಮುಸ್ಲಿಂ ಲೀಗು ಘಟನಾ ಸಮಿತಿಯನ್ನು ಸೇರದಿದ್ದರೆ ಸಂಸ್ಥಾನ ಪ್ರತಿನಿಧಿಗಳೂ ಸೇರುವುದಿಲ್ಲ. ಈ ಪರಿಸ್ಥಿತಿಯಲ್ಲಿ ಪಂಡಿತ ಜವಾಹರಲಾಲರ ಗೊತ್ತುವಳಿಯನ್ನು ಮುಂದಕ್ಕೆ ಹಾಕುವದರಲ್ಲಿ ಅರ್ಥವೇನಿದೆ? ಅಲ್ಲದೆ ಈಗ ಈ ಗೊತ್ತುವಳಿ ಸ್ವೀಕರಿಸುವದರಿಂದ ಹಾನಿಯೇನೂ ಆಗುವುದಿಲ್ಲ. ಏಕೆಂದರೆ ಈ ಗೊತ್ತುವಳಿಯ ಧ್ಯೇಯ ಸ್ವೀಕೃತವಾದ ಬಳಿಕವೂ ಅದರಲ್ಲಿ ಹೆಚ್ಚುಕಡಿಮೆ ಮಾಡಲಿಕ್ಕೆ ಯಾವದೇ ಅಡ್ಡಿಯಿಲ್ಲೆಂದು ಜವಾಹರಲಾಲ ಮೊದಲಾದವರು ಸ್ಪಷ್ಟಪಡಿಸಿರುವರು. ಹೀಗಿದ್ದರೂ ಡಾ. ಜಯಕರ ಡಾ. ಕುಂಜರು ಪ್ರಭೃತಿಗಳು ಈ ಗೊತ್ತುವಳಿಗಾಗಿ ಅದೇಕೆ ಅಷ್ಟು ಬೆದರಿರುವರೊ ತಿಳಿಯದು! ಮಹಾತ್ಮಾ ಗಾಂಧಿಯವರು ಮೊದಲನೆ ಸಲವೆ ಘಟನಾ ಸಮಿತಿಯ ಉಲ್ಲೇಖವನ್ನು ತಮ್ಮ ಭಾಷಣದಲ್ಲಿ ಮಾಡುತ್ತ 'ದೂರ್ವ ವಿಚಾರಾನಂತರ ಪಂಡಿತ ಜವಾಹರಲಾಲರು ಮಂಡಿಸಿದ ಈ ಗೊತ್ತುವಳಿಗೆ ಎಷ್ಟೇ ವಿರೋಧಬಂದರೂ ಅವರು ಅದಕ್ಕೇ ಬದ್ಧರಾಗುವರೆಂದು ನನಗೆ ವಿಶ್ವಾಸವಿದೆ. ಸತ್ಯ ಮತ್ತು ನ್ಯಾಯದತ್ತ ಪೂರ್ಣ ಲಕ್ಷಕೊಟ್ಟು ಯಾವದೇ ನಿರ್ಧಾರಕ್ಕೆ ಬರಬೇಕೆಂದೂ ಎಂಥ ಪ್ರಸಂಗದಲ್ಲಿಯೂ ಅವಕ್ಕೇ ಬದ್ಧರಾಗಬೇಕೆಂದೂ' ನೆಹರೂರವರು ಲಂಡನ ಪ್ರವಾಸದಿಂದ ನಾವು ಪಾಠ ಕಲಿಯಬೇಕಾಗಿದೆಂದೂ ಹೇಳಿರುವರು. ಈ ಪರಿಸ್ಥಿತಿಯಲ್ಲಿ ಡಾ. ಜಯಕರರು ತಮ್ಮ ಉಪಸೂಚನೆಯನ್ನು ಹಿಂತೆಗೆದುಕೊಂಡು ಒಮ್ಮತದಿಂದ ಈ ಗೊತ್ತುವಳಿ ಸ್ವೀಕರಿಸಿ ಘಟನಾ ಸಮಿತಿಯ ಮುನ್ನಡೆಗೆ ಅವಕಾಶವೀಯಬೇಕೆಂದು ಸೂಚಿಸಬಯಸುತ್ತೇವೆ.

## ಆಕಾಶವಾಣಿಯಲ್ಲಿ ಕನ್ನಡಕ್ಕೆ ಸ್ಥಾನ

ಹಿಂದುಸ್ತಾನದ ಕೇಂದ್ರ ಆಕಾಶವಾಣಿಯಲ್ಲಿ ಮತ್ತು ಮುಂಬಯಿ ಮದ್ರಾಸ ಪ್ರಾಂತಿಕ ಆಕಾಶವಾಣಿಗಳಲ್ಲಿ ಕನ್ನಡಕ್ಕೆ ತಕ್ಕ ಸ್ಥಾನ ಕೊಡಬೇಕೆಂದು ಕನ್ನಡಿಗರು ಬಹು ದಿನಗಳಿಂದ ಕೇಳಿಕೊಳ್ಳುತ್ತಿರುವರು. ಕನ್ನಡಕ್ಕಿಂತ ಕಡಮೆ ಪ್ರಚಾರವಿದ್ದ ಮತ್ತು ಜನರಿದ್ದ ಹಲವಾರು ಭಾಷೆಗಳಿಗೆ ಆಕಾಶವಾಣಿಯಲ್ಲಿ ಸ್ಥಾನವಿದ್ದರೂ ಕನ್ನಡಕ್ಕೆ ಇಲ್ಲದಿರುವದು ಶುದ್ಧ ಅನ್ಯಾಯವೆಂದು ಬೇರೆ ಹೇಳಬೇಕಿಲ್ಲ. ಇದೀಗ ರಾಷ್ಟ್ರೀಯ ಸರಕಾರ ಸಂಸ್ಥಾಪಿತವಾದ್ದರಿಂದ ಕನ್ನಡ ಭಾಷೆಗೆ ತಕ್ಕ ಅವಕಾಶ ಸಿಕ್ಕುವುದೆಂದು ನಂಬಲಾಗಿದೆ. ಹೊಸದಿಲ್ಲಿಯಲ್ಲಿ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷ ಶ್ರೀ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಹಳೆ ಹೊಸದಿಲ್ಲಿಯ ಕನ್ನಡಿಗರ ಸಭೆ ಸೇರಿ ಈ ಬಗ್ಗೆ ಮಹತ್ವದ ಗೊತ್ತುವಳಿಯನ್ನು ಸ್ವೀಕರಿಸಲಾಯಿತು. ಹಿಂದುಸ್ತಾನದಲ್ಲಿ ಮಹತ್ವದ ೧೪೦ ಲಕ್ಷ ಜನರಾಡುತಿರುವ ಕನ್ನಡ ಭಾಷೆಗೆ ಕೇಂದ್ರ ಆಕಾಶವಾಣಿಯ ಕಾರ್ಯಕ್ರಮದಲ್ಲಿ ಅವಕಾಶವಿಲ್ಲದಿದ್ದುದಕ್ಕಾಗಿ ಸಭೆ ವಿಷಾದ ಪ್ರದರ್ಶಿಸಿ ಇನ್ನು ಮುಂದಾದರೂ ಕೇಂದ್ರ ಆಕಾಶವಾಣಿಯ ಮೂಲಕ ಕನ್ನಡದಲ್ಲಿ ಸುದ್ದಿ ಹೇಳುವ ಉಪಕ್ರಮ ಮಾಡಬೇಕೆಂದು ಕೇಳಿಕೊಳ್ಳಲಾಯಿತು. ಮುಂಬಯಿ ಕೇಂದ್ರದಿಂದ ಕನ್ನಡ ಆಕಾಶವಾಣಿಗಾಗಿ ಅವಶ್ಯಕ ಸೌಕರ್ಯಗಳನ್ನೊದಗಿಸಬೇಕು. ಮತ್ತು ಮದ್ರಾಸ ಆಕಾಶವಾಣಿಯಲ್ಲಿ ಕನ್ನಡ ಕಾರ್ಯಕ್ರಮ ಸೇರಿಸಬೇಕು ಎಂದೂ ಬಿನ್ನವಿಸಿಕೊಳ್ಳಲಾಯಿತು. ಅಲ್ಲದೆ ಅದಷ್ಟು ಬೇಗ ಬ್ರಿಟಿಶ ಕರ್ನಾಟಕದಲ್ಲಿ ಒಂದು ಆಕಾಶವಾಣಿ ಕೇಂದ್ರವನ್ನು ತೆರೆವ ಏರ್ಪಾಡು ಮಾಡಬೇಕು. ಇದರಿಂದ ಕನ್ನಡಕ್ಕೆ ಯೋಗ್ಯ ಪ್ರಾಶಸ್ತ್ಯ ಕೊಡಲನುಕೂಲವಾಗುವದು ಎಂದು ಮುಂತಾಗಿಯೂ ಕೇಳಿಕೊಳ್ಳಲಾಯಿತು. ಹಳೆ ಹೊಸದಿಲ್ಲಿ ಮತ್ತು ಸಿಮಲಾದಲ್ಲಿಯ ಕನ್ನಡಿಗರು ಪರಸ್ಪರ ಸ್ನೇಹ ಸಂಬಂಧ ಬೆಳೆಸಿಕೊಳ್ಳಲು ಕರ್ನಾಟಕ ಸಂಘವನ್ನು ಸ್ಥಾಪಿಸಿಕೊಳ್ಳಬೇಕೆಂದೂ ಬಿನ್ನವಿಸಲಾಯಿತು. ಆಕಾಶವಾಣಿಯ ಪ್ರಶ್ನೆ ಅತ್ಯಂತ ಮಹತ್ವದ್ದಾದ್ದರಿಂದ ಶ್ರೀ ನಿಜಲಿಂಗಪ್ಪನವರು, ಶ್ರೀ ದಿವಾಕರ, ಕಾಮತ ಕರ ಮತ್ತು ಜಿನರಾಜ ಹೆಗ್ಡೆಯವರೊಡನೆ ೧೭ ನೇ ತಾರೀಕು ನಡುಗಾಲ ಸರಕಾರದ ಸುದ್ದಿ ವಾರ್ತೆಯ ಮಂತ್ರಿಗಳಾದ ಸರದಾರ ವಲ್ಲಭಾಯಿ ಪಟೇಲರನ್ನು ಭೆಟ್ಟಿಯಾಗಿ ಈ ಬಗ್ಗೆ ಕನ್ನಡಿಗರ ಬಿನ್ನಹವನ್ನು ಅರಿಕೆ ಮಾಡಿಕೊಂಡರು. ಮದ್ರಾಸಿನಲ್ಲಿ ಈ ಮೊದಲು ಕನ್ನಡ ಸುದ್ದಿ ಕೊಡುತ್ತಿದ್ದು ಕ್ಲಿಷ್ಟ ಕಾರಣದಿಂದ ಅದನ್ನು ನಿಲ್ಲಿಸಲಾಗಿದೆ. ಅದನ್ನು ಪುನಃ ಪ್ರಾರಂಭಿಸಬೇಕೆಂದೂ ಬಿನ್ನವಿಸಲಾಯಿತು. ಈ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಬೇಗನೆ ನಿರ್ಣಯಕ್ಕೆ ಬರಲಾಗುವದೆಂದು ಸರದಾರರು ಆಶ್ವಾಸಿಸಿದರು. ಸರದಾರರ ಈ ಆಶ್ವಾಸನ ಬೇಗನೆ ಕಾರ್ಯರೂಪವನ್ನೆ ಬರಲೆಂದು ಹಾರಯಸುತ್ತೇವೆ.

# ಘಟನಾ ಸಮಿತಿ ಮತ್ತು ಭಾಷಾನುಗುಣ ಪ್ರಾಂತಗಳು

( ಪ್ರೇಷಿತ ಪ್ರತಿನಿಧಿಯಿಂದ )

ಮೀರತ ಅಧಿವೇಶನ ಮೊದಲು ಮಾಡಿ ಭಾಷಾನುಗುಣ ಪ್ರಾಂತ ರಚನೆಯ ಗೊತ್ತುವಳಿಯೊಂದನ್ನು ಕಾಂಗ್ರೆಸ್ ವರ್ಕಿಂಗ ಕಮಿಟಿಯವರು ಅಥವಾ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯವರು ಸ್ವೀಕರಿಸುವಂತೆ ಮಾಡಬೇಕೆಂಬ ಪ್ರಯತ್ನ ಹಲವರಿಂದ ನಡೆದಿದೆ. ಆದರೆ ಅದು ಇನ್ನೂ ಕೈಗೂಡಿಲ್ಲ.

ಇಲ್ಲಿ ೮ ನೇ ತಾರೀಖಿನ ದಿನ ನಡೆದ ಭಾಷಾನುಗುಣ ಪ್ರಾಂತ ರಚನೆಯಲ್ಲಿ ಅಭಿರುಚಿ ಇದ್ದವರ ಸಭೆಯಲ್ಲಿ ಒಂದು ಸಣ್ಣ ಕಮಿಟಿ ನೇಮಕವಾಯಿತಷ್ಟೆ. ಅವರು ತಾರೀಖು ೬ ಮುಂಜಾನೆ ಕುಳಿತು ಘಟನಾ ಸಮಿತಿಯಲ್ಲಿ ಮಂಡಿಸಬಹುದಾದ ಒಂದು ಗೊತ್ತುವಳಿಯ ಕರಡನ್ನು ಸಿದ್ಧಪಡಿಸಿವರು. ಅದು ಇನ್ನು ವರ್ಕಿಂಗ ಕಮಿಟಿ ಹಾಗೂ ಕಾಂಗ್ರೆಸ ಪಕ್ಷದ ಕಾರ್ಯಕಾರೀ ಸಮಿತಿಯ ಮುಂದೆ ಬರತಕ್ಕದ್ದಿದೆ. ಆದರೂ ಅದನ್ನು ಇದ್ದ ಕಿದ್ದ ಹಾಗೆ ಇಲ್ಲಿ ಕೊಡುವದು ಉಚಿತವು.

(ಅ) ಮುಂಬರುವ ಘಟನೆಯಲ್ಲಿ ಹಿಂದುಸ್ಥಾನದ ಪ್ರಾಂತಗಳನ್ನು ಭಾಷೆ, ಸಂಸ್ಕೃತಿಗಳಿಗನುಸರಿಸಿ ಏರ್ಪಡಿಸಬೇಕು ಎಂಬ ತತ್ವವನ್ನು ಈ ಘಟನಾ ಸಮಿತಿಯು ಒಪ್ಪುವದು.

(ಬ) ಮುಂಬರುವ ಘಟನಾ ಕಾಯದೆಯಲ್ಲಿ ಸೇರಿಸುವಂತೆ ನಾಮಕರಣ ಮಾಡುವ ಹಾಗೂ ಆಯಾ ಪ್ರಾಂತಗಳ ಬಗ್ಗೆ ವರದಿ ಮಾಡುವ ಉದ್ದೇಶದಿಂದ ಈ ಕೆಳಗಿನ ಗೃಹಸ್ಥರದೊಂದು ಮಂಡಲವನ್ನು ಈ ಘಟನಾ ಸಮಿತಿಯು ನೇಮಿಸುತ್ತದೆ. ( ಹೆಸರುಗಳು ಹಿಂದುಗಡೆ ಕೊಡಲಾಗುವವು).

ಕ) ಹೊಸ ಘಟನೆ ಸ್ವೀಕೃತವಾದೊಡನೆ ಈ ಹೊಸ ಭಾಷಾನುಗುಣ ಪ್ರಾಂತಗಳು ಅಸ್ತಿತ್ವದಲ್ಲಿ ಬರುವಂತೆ ಅವಶ್ಯವಿರುವ ಸೀಮಾ ಸಮಿತಿಗಳನ್ನಾಗಲಿ ಇತರ ಸಮಿತಿಗಳನ್ನಾಗಲಿ ನೇಮಿಸುವ ವ್ಯವಸ್ಥೆಯಾಗುವಂತೆ ಈ ಘಟನೆಯಲ್ಲಿ ಕಲಮುಗಳು ಇರತಕ್ಕದ್ದೆಂದು ಈ ಘಟನಾ ಸಮಿತಿಯು ನಿರ್ಧರಿಸುತ್ತದೆ.

ಈ ಕರಡು ಇನ್ನೂ ಎಷ್ಟು ಅದಲು ಬದಲಾಗುವದೋ ಹೇಳಲುಬಾರದು.

## ಇದು ಏಕೆ ಮುಂದೆ ಬೀಳುತ್ತಿದೆ?

ಈ ಮಾತನ್ನು ಕಾಂ. ಕಾರ್ಯ ಸಮಿತಿಯವರು ತಮ್ಮದಾಗಿ ಏಕೆ ಕೈಕೊಳ್ಳಲೊಲ್ಲರೆಂಬದಕ್ಕೆ ಒಂದೇ ಒಂದು ಕಾರಣವಿದೆ. ಮುಸಲ್ಮಾನ ಬಂಧುಗಳು ವಿರುದ್ಧ ಹೋಗಬಹುದೋ? ಆದರೆ ಎಷ್ಟೋ ಮಹತ್ತರವಾದ ಎಡರು ತೊಡರುಗಳನ್ನು ಎದುರಿಸಿ ಕಾಂಗ್ರೆಸು ಮುಂದರಿಯುತ್ತಿರುವಾಗ ಕೇವಲ ಮುಸಲ್ಮಾನ ಬಾಂಧವರು ಅವಾಂತರ ಕಾರಣಗಳ ಮೂಲಕ ವಿರೋಧ ಮಾಡಬಾರದೆಂದು ತಿಳಿದು ಈ ಪ್ರಶ್ನೆಯನ್ನು ಮುಂದಕ್ಕೆ ಹಾಕುತ್ತಿರುವದು ಅದೂರ ದೃಷ್ಟಿ ಎನಿಸುವದು.

ಘಟನಾ ಸಮಿತಿಯ ಮುಖ್ಯ ಉದ್ದೇಶಗಳನ್ನು ವಿವರಿಸುವ ಗೊತ್ತುವಳಿ ತಾ. ೧೩ ಕ್ಕೆ ಸಭೆಯಲ್ಲಿ ಬರದೆ ಹೋಯಿತು. ವಿಚಾರ ಮಾಡಲು ಸಭಾಸದರಿಗೆ ಹೆಚ್ಚು ವೇಳೆ ಬೇಕಾಗಿತ್ತು. ಆದುದರಿಂದ ಇಂದು ಸಾಯಂಕಾಲ ವಿಚಾರ ಮಂಡಲದಲ್ಲಿ ( ಕನ್‌ಸಲ್ಟೇಟಿವ್ಹ ಕಮಿಟಿ ) ಭಾಷಾನುಗುಣ ಪ್ರಾಂತ ರಚನೆಯ ವಿಷಯ ಬಂದಿತು.

ಈಗಲೆ ಈ ಪ್ರಶ್ನೆ ಬೇಡ, ಘಟನಾಸಮಿತಿಯ ಕೆಲಸ ಮುಗಿದು ಮೊದಲನೆ ಆಯ್ಕೆಗಳಾಗಲಿ ಬಳಿಕ ನೋಡುವ. ಇದರಿಂದ ಅಡಚಣೆಗಳು ಉಂಟಾಗುವವು ಮುಂತಾಗಿ ಹೇಳಿ ಹಲವು ಹಿರಿಯರು ಈ ಪ್ರಶ್ನೆಯನ್ನು ಮುಂದಟ್ಟುವ ಪ್ರಯತ್ನ ಮಾಡಿದರು. ಆದರೆ ಈ ಪ್ರಶ್ನೆಯ ಪುರಸ್ಕರ್ತರಾದ ಶ್ರೀ ಪಟ್ಟಾಭಿ ಮುಂತಾದವರು ಇನ್ನು ಮುಂದೆ ಹಾಕುವದು ಬೇಡ ಎಂದು ಹಟ ಹಿಡಿದರು. ಕೊನೆಗೆ ತಾಸು ಚರ್ಚೆ ನಡೆದು ಈ ವಿಷಯವನ್ನು ಘಟನಾ ಸಮಿತಿಯವರು ಕೈಕೊಳ್ಳಬೇಕೆಂದು ಗೊತ್ತಾಯಿತು. ಡಾ. ಜಯಕರರು ಹಾಗೂ ಅಲ್ಲಾದಿ ಕೃಷ್ಣಸ್ವಾಮಿಯವರು ಅದರ ಕರಡು ಸಿದ್ಧ ಮಾಡಬೇಕೆಂದು ಗೊತ್ತಾಯಿತು. ಇದೊಂದು ದೊಡ್ಡ ಕೆಲಸವಾಯಿತು ಎಂದು ಹೇಳಬಹುದು.

೧೯೩೫ ರ ಕಾನೂನು ಪಾಸಾಗುವ ಕಾಲಕ್ಕೆ ಒಂಬತ್ತೇ ಪ್ರಾಂತಗಳು ಅಸ್ತಿತ್ವದಲ್ಲಿದ್ದವು. ಆದರೆ ೮೬ನೇ ಕಲಮಿನನ್ವಯ ಸಿಂಧ ಹಾಗೂ ಓಡಿಸಾ ಈ ಎರಡು ಪ್ರಾಂತಗಳು ಅವುಗಳಿಗೆ ಜೋಡಿಸಲ್ಪಟ್ಟವು. ಆಗ ಇನ್ನೂ ಸೀಮೆಗಳಾವವೂ ನಿರ್ಧರಿಸಲಾಗಿದ್ದಿಲ್ಲ.

ಅದೇ ರೀತಿ ಈಗಿನ ಘಟನಾ ಕಾನೂನು ಪಾಸಾಗುವ ಕಾಲಕ್ಕೆ ಇಂಥಿಂಥ ಪ್ರಾಂತಗಳು ಆಗಬೇಕೆಂದು ನಾಮನಿರ್ದೇಶ ಮಾಡಲು ಯಾವ ಅಡ್ಡಿಯೂ ಇಲ್ಲ ಎಂಬುದೇ ಮುಖ್ಯ ಮಾತು ಸೀಮಾಸಮಿತಿಗಳನ್ನು ಮುಂದೆ ರಚಿಸಲು ಯಾವ ಅಡ್ಡಿಯೂ ಇಲ್ಲ.

ಅತ್ತ ಘಟನಾ ಸಮಿತಿಯು ಕೆಲಸ ನಡೆದಿರಲು ಕಾಂಗ್ರೆಸ ಘಟನಾ ಸಮಿತಿಕೂಡ ತನ್ನ ಕೆಲಸವನ್ನು ದಿಲ್ಲಿಯಲ್ಲಿಯೇ ಪ್ರಾರಂಭಿಸಿತು. ಯೋಜಕರಾದ ಶ್ರೀ ದಿವಾಕರರ ವಾಸಸ್ಥಾನದಲ್ಲಿ ಅದರ ಪ್ರಥಮ ಸಭೆ ಮುಂಜಾನೆ ೯ ಗಂಟೆಗೆ ಕೂಡಿತು. ಹದಿನಾಲ್ಕು ಸಭಾಸದರಲ್ಲಿ ೧೧ ಜನರು ಹಾಜರಿದ್ದರು. ಒಂದೇ ಸಭೆಯಲ್ಲಿ ಮುಗಿಯುವ ಕೆಲಸವು ಇದಲ್ಲ! ಆದುದರಿಂದ ಮತ್ತೆ ಶನಿವಾರದಿಂದ ಹಲವು ದಿನ ನಿತ್ಯ ಕೂಡಬೇಕಾಗಬಹುದು.

ಸದ್ಯಕ್ಕೆ ನಡೆದ ಚರ್ಚೆಯ ಮೇಲಿಂದ ನೋಡಲಾಗಿ, ಈಗಿದ್ದ ಘಟನೆ ಬಹಳ ಅಸಮಾಧಾನಕಾರಕವಿರುವದು, ಅದರಲ್ಲಿ ಅನ್ಯಾಯ, ಪತನ, ಮುಂತಾದವುಗಳಿಗೆ ಬಹಳ ಅಸ್ಪದವಿದೆ. ಇದನ್ನು ಮಾರ್ಪಡಿಸಬೇಕು, ಕಾಂಗ್ರೆಸಿನ ಯಾವದೊಂದು ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರೇ ಸಮಿತಿಗಳ ಕೆಲಸ ನಡೆಸಬೇಕು ಎಂದು ಮುಂತಾದ ಮಾತುಗಳು ಎಲ್ಲರಿಗೂ ಒಪ್ಪಿತವಿರುವವು. ಅದೇ ಕಾಲಕ್ಕೆ ಕ್ರಾಂತಿಕಾರಕ ಬದಲಾವಣೆಗಳಿಗೆ ಸಭಾಸದರು ವಿರುದ್ಧವಿರುವರು. ಆದರೆ ಈಗ ಈ ಕಾಂಗ್ರೆಸ್ ಸಂಸ್ಥೆಯ ಕೆಲಸದ ಸ್ವರೂಪವೇ ಬದಲಾಗಿರುವದರಿಂದ ಹೊಸ ತರದ ಘಟನೆ, ಅದನ್ನು ಅಮಲಿನಲ್ಲಿ ತರತಕ್ಕ ವ್ಯಕ್ತಿಗಳು ಅವಶ್ಯ ಎಂಬ ಬಗ್ಗೆ ಸಂಶಯವಿಲ್ಲ.

## ಅಂತರ್ ರಾಷ್ಟ್ರೀಯ

[ ೫ನೇ ಪುಟದಿಂದ ]

### ಒಂದಧ್ಯಾಯದ ಸಮಾಪ್ತಿ

ರಶಿಯನ್ ಬೆಂಬಲದಿಂದ ಅಝುರಬೈಜಾನದಲ್ಲಿ ಸ್ಥಾಪಿಸಲ್ಪಟ್ಟಿದ್ದ "ಪ್ರಜಾತಂತ್ರ" ಪಕ್ಷದ ಸ್ವಾಯತ್ತ ಸರಕಾರ ರಶಿಯಾದ ನಿಷ್ಕ್ರಮಣದ ಒಂದು ವರ್ಷದೊಳಗೆ ಪರಿಸಮಾಪ್ತವಾದುದು ವಿಚಿತ್ರವೇ ಸರಿ. ಇರಾಣಿ ಸರಕಾರದ ಸೈನ್ಯ ಅಝುರಬೈಜಾನ ಪ್ರಾಂತವನ್ನು ಪ್ರವೇಶಿಸಿದೊಡನೆ "ಸ್ವಾತಂತ್ರ್ಯದ ರಕ್ಷಣೆಗಾಗಿ ಕೊನೆಯವರೆಗೆ ಹೋರಾಡುವ" ಪಣ ತೊಟ್ಟ ಸ್ವಾಯತ್ತ ಸರಕಾರ ಇಸ್ಪೇಟಿನ ಮನೆಯಂತೆ ಜಗಿದು ಬಿದ್ದು ಬಿಟ್ಟಿತು. ಕೇಂದ್ರದ ಪಡೆಗಳಿಗೆ ಪ್ರಾಂತದ ರಾಜಧಾನಿಯನ್ನು ತಲುಪುವದು ನೀರು ಕುಡಿದಷ್ಟು ಸುಲಭವಾಯಿತು. ಎಲ್ಲೆಲ್ಲಿಯೂ ಜನರು ಪ್ರಜಾತಂತ್ರ ಪಕ್ಷದ ಮುಂದಾಳುಗಳ ಕೊಲೆ ನಡೆಸಿದರು. ಪ್ರಾಂತದ ಪ್ರಜಾತಂತ್ರ ಸೇನೆ ಶರಣುಬಂತು. ಪ್ರಾಂತದ ಮುಖ್ಯಮಂತ್ರಿ ಪಿಶೇವಾರಿ ತನ್ನ ಸಂಗಡಿಗರೊಡನೆ ರಶಿಯಾಕ್ಕೆ ಓಡಿಹೋದನು. ಅವನ ಸೇನೆಯ ಸೋಲಿಗೆ ಮುಖ್ಯವಾಗಿ ವಿಮಾನಗಳ ಅಭಾವವೂ ಕಾರಣವೆಂದು ಹೇಳಲಾಗಿದೆ. ಕೇಂದ್ರ ಸರಕಾರದ ಸೈನ್ಯಗಳೀಗ ರಶಿಯನ್ ಗಡಿಯವರೆಗೂ ನುಗ್ಗಿವೆ.

ಆದರೆ ಯಾವ ಚುನಾವಣೆಗಳ ಪರಾಮರ್ಶೆಗೆಂದು ಈ ಸೈನ್ಯ ಕಳಿಸುವ ಛಲವನ್ನು ಇರಾಣಿ ಸರಕಾರ ತೊಟ್ಟಿತೊ ಆ ಚುನಾವಣೆಗಳನ್ನು ಮುಂದೆ ಹಾಕಲಾಗಿದ್ದು ಆಶ್ಚರ್ಯ! ಚುನಾವಣೆಗಳನ್ನು ಮುಂದೂಡಬೇಕೆಂಬ ರಶಿಯನ್ ಒತ್ತಾಯವನ್ನು ಸರಕಾರ ಕಡೆಗಣಿಸಿತ್ತು. ಚುನಾವಣೆಗಳಾಗಿ ಹೊಸ ಪಾರ್ಲಮೆಂಟು ಕೂಡಿದ ನಂತರವೇ ಉತ್ತರ ಪ್ರಾಂತದಲ್ಲಿ ತನಗೆ ಎಣ್ಣೆಯ ಸವಲತ್ತುಗಳು ದೊರೆಯುವ ಸಂಭವವಿದ್ದುದರಿಂದ ರಶಿಯವೂ ಪಿಶೇವಾರಿಗೆ ಅಷ್ಟು ಬೆಂಬಲ ಕೊಟ್ಟಿರಲಿಲ್ಲ. ಆದರೆ ಈಗ ಚುನಾವಣೆಗಳನ್ನು ಮುಂದೆ ಹಾಕಿದ್ದರಿಂದ ಈ ಇಡೀ ಆಟವೇ ವಿದೇಶಿ ಕೈವಾಡಕ್ಕೊಳಗಾದ ಇರಾಣದ ಸರಕಾರ ರಶಿಯಾದ ವಿರುದ್ಧ ರಚಿಸಿದ ಕೂಟವೆಂದು ರಶಿಯಾಕ್ಕೆನಿಸಿದರೆ ಹೆಚ್ಚಲ್ಲ. ಆದರೆ ರಶಿಯಾ ರಚಿಸಿದ ಅಜರಬೈಜಾನ ಪ್ರಜಾತಂತ್ರದ ಬಲಾಬಲ ಮಾತ್ರ ಈಗ ನಿಷ್ಕರ್ಷೆಯಾಗಿದೆ. ಜನತೆಯ ಒಪ್ಪಿಗೆಯಿಲ್ಲದೆ ಹೊರ ಬೆಂಬಲದಿಂದ ಅದಕ್ಕೆ ಹಿತಮಾಡಬೇಕೆಂದು ಪ್ರಯತ್ನಿಸುವವರ ಪಾಡು ಅಜರಬೈಜಾನ ಪ್ರಜಾತಂತ್ರಗಳಿಗೆ ಪ್ರಾಪ್ತವಾಯಿತು.

### ದ. ಆಫ್ರಿಕೆಯ ಪ್ರತಿಕ್ರಿಯೆ

ಯುಕ್ತ ರಾಷ್ಟ್ರ ಸಂಘದಲ್ಲಿ ದಕ್ಷಿಣ ಆಫ್ರಿಕಾ ಹಿಂದೀಯರ ನಿಷಯಕ್ಕಾದ ಗೊತ್ತುವಳಿಯಿಂದ ಅಲ್ಲಿ ಎಲ್ಲೆಲ್ಲಿಯೂ ಸಿಟ್ಟು ಪ್ರದರ್ಶಿಸಲ್ಪಡುತ್ತಿದೆ. ವರ್ಣದ್ವೇಷದ ಪರಮಾವಧಿಯನ್ನು ಧೋರಣೆಯಾಗಿಟ್ಟುಕೊಂಡ ಡಾ. ಮಲಾನರು ದಕ್ಷಿಣ ಆಫ್ರಿಕಾ ಸರಕಾರ ಯುಕ್ತ ರಾಷ್ಟ್ರ ಗೊತ್ತುವಳಿಯನ್ನು ತಿರಸ್ಕರಿಸಿ "ಬಿಳಿ ಆಫ್ರಿಕೆ"ಯ ಧೋರಣೆಯನ್ನು ಮುಂದೆ ಸಾಗಿಸಬೇಕೆಂದು ಹೇಳಿದ್ದಲ್ಲದೆ ಹಿಂದೀಯರನ್ನೆಲ್ಲ ಅಲ್ಲಿಂದ ಹೊರಗಟ್ಟಿ ಬಿಡುವದೇ ಇದಕ್ಕೆ ಯೋಗ್ಯ ಉಪಾಯವೆಂದು ಸಾರಿದೆ. ಈ ಕಾರಣದಿಂದ ದ.ಆಫ್ರಿಕೆಯುಕ್ತ ರಾಷ್ಟ್ರ ಸಂಘದಿಂದ ಹೊರಬೀಳಬೇಕಾದರೂ ಚಿಂತಿಲ್ಲವೆಂದೂ "ರಾಷ್ಟ್ರೀಯವಾದಿ" ಪತ್ರಿಕೆಗಳ ಅಭಿಪ್ರಾಯ. ಹಲವು ಪತ್ರಿಕೆಗಳು ಯುಕ್ತ ರಾಷ್ಟ್ರ ಸಂಘ ಈ ಗೊತ್ತುವಳಿಯಿಂದ ತನ್ನ ಕಾ[illegible] ಮೇಲೆ ತಾನೇ ಕಲ್ಲು ಹಾಕಿಕೊಂಡಿದೆಯೆಂದಿರುವವು. ರಾಷ್ಟ್ರೀಯವಾದಿ ಪತ್ರಿಕೆಗಳು ಜನರಲ್ ಸ್ಮಟ್ಸರನ್ನು ದೂರಿಕೊಂಡು, ಯುಕ್ತ ರಾಷ್ಟ್ರ ಸದಸ್ಯತ್ವಕ್ಕೆ ದ ಆಫ್ರಿಕೆ ಸೇರುವಾಗಲೆ ಅಂತರಿಕ ಪ್ರಶ್ನೆಗಳಲ್ಲಿ ಕೈಹಾಕಬಾರದೆಂಬ ನಿರ್ದಿಷ್ಟ ಆಶ್ವಾಸನೆ ಪಡೆಯಬೇಕಾಗಿತ್ತೆಂದೂ ಈಗ ಸ್ಮಟ್ಸರು ಅಧಿಕಾರ ಬಿಟ್ಟುಕೊಟ್ಟು ಈ ವಿಷಯದಲ್ಲಿ ದಿಟ್ಟತನದ ಧೋರಣೆ ವಹಿಸಲು ಸಿದ್ಧವಾದ ಹೊಸ ಮಂತ್ರಿಮಂಡಲ ಬರಬೇಕೆಂದೂ ಹೇಳುತ್ತವೆ. ಇದಲ್ಲದೆ ಹಿಂದೀಯರ ಸಾಮಾಜಿಕ ಬಹಿಷ್ಕಾರವೂ ಪ್ರಾರಂಭವಾಗಿದೆ ಹಿಂದೀಯರನ್ನು ಕೆಲಸಕ್ಕಿಟ್ಟುಕೊಂಡ ಅಂಗಡಿಗಳಲ್ಲಿ ಯುರೋಪಿಯನ್ನರು ಏನೂ ಕೊಂಡುಕೊಳ್ಳಬಾರದು ಹಿಂದೀಯರ ಅಂಗಡಿಗಳಿಗೆ ಯುರೋಪಿಯನ್ನರು ಗಿರಾಕಿಗಳಾಗಬಾರದು. ಅಂದರೆ ತಂತಾನೆ ಅವರು ಇಲ್ಲಿಂದ ಹೊರಟುಹೋಗುವರೆಂದು ಕೆಲವರು ಸೂಚಿಸಿದ್ದಾರೆ.





ಕರ್ಮವೀರ ಹರಿಜನ ಪುರವಣಿ

## ಗ್ರಾಮೋದ್ಯೋಗಗಳು ಮತ್ತು ಸರಕಾರ

[ಬಹುತರ ಎಲ್ಲ ಕಾಂಗ್ರೆಸ್ ಸರಕಾರಗಳು ಗ್ರಾಮೋದ್ಯೋಗಗಳ ವಿಷಯದತ್ತ ತಮ್ಮ ಲಕ್ಷ್ಯವನ್ನು ಪೂರಯಿಸುತಿರುವವು. ಕೆಲ ಪ್ರಾಂತಗಳಲ್ಲಿ ಗ್ರಾಮೋದ್ಯೋಗಗಳಿಗಾಗಿಯೆ ಒಬ್ಬ ಮಂತ್ರಿಯನ್ನೂ ನೇಮಿಸಿರುವವು. ಶ್ರೀ ವಾನುಸುಭೇದಾರರ ಅಧ್ಯಕ್ಷತೆಯಲ್ಲಿ ಮುಂಬಯಿ ಸರಕಾರದವರು ಈ ಬಗ್ಗೆ ಒಂದು ಸಮಿತಿಯನ್ನು ನೇಮಿಸಿರುವರು. ಗ್ರಾಮ ಕೈಗಾರಿಕೆ ಮತ್ತು ಉದ್ಯೋಗಗಳ ಅಭಿವೃದ್ಧಿಯ ಬಗ್ಗೆ ವಿಚಾರಣೆ ನಡೆಸಿ ಅವಶ್ಯಕ ಉಪಾಯಗಳನ್ನು ಸೂಚಿಸಿ ವರದಿ ಮಾಡಲು ಈ ಸಮಿತಿಗೆ ಕೇಳಿಕೊಳ್ಳಲಾಗಿದೆ. ಸರಕಾರದವರು ಯಾವಾವ ಬಗೆಯಿಂದ ಸಹಾಯ ಸಲ್ಲಿಸಬಹುದು; ಸ್ಥಳೀಕ ಉತ್ಪಾದನೆಯನ್ನೆಲ್ಲ ಅಲ್ಲಿಯೆ ನುರಿಸಿ ವಸ್ತುಗಳನ್ನು ಸಿದ್ಧಪಡಿಸಬೇಕಾದರೆ ಬೇರೆ ಬೇರೆ ಉದ್ಯೋಗಗಳಿಗೆ ಅವಶ್ಯವಾಗಿರುವ ಕಚ್ಚಾ ಮಾಲುಗಳ ಆಯಾತ ನಿರ್ಯಾತಗಳ ಮೇಲೆ ನಿರ್ಬಂಧ ಹಾಕುವದವಶ್ಯವೇ ಹೇಗೆ ಮುಂತಾದ್ದನ್ನೆಲ್ಲ ಈ ಸಮಿತಿ ವಿಚಾರ ಮಾಡಿ ವರದಿ ಒಪ್ಪಿಸಬೇಕಾಗಿದೆ. ಈ ವಿಷಯದ ಬಗ್ಗೆ ಕೆಲಮಾತುಗಳನ್ನು ಈ ಕೆಳಗಿನ ಲೇಖದಲ್ಲಿ ನಾನು ಚರ್ಚಿಸಿರುವೆನು. ಎಲ್ಲ ವಿಷಯವನ್ನೂ ಕೂಲಂಕಷವಾಗಿ ಚರ್ಚಿಸಿರುವೆನೆಂದಲ್ಲ. ಆದರೆ ಅಲಕ್ಷ್ಯ ಮಾಡಲ್ಪಟ್ಟವೆಂದು ನನಗೆ ತೋರುವ ಕೆಲ ಮಾತುಗಳನ್ನು ವಿಮರ್ಶಿಸಿದ್ದೇನೆ. ]

ಮೊದಲನೆಯದಾಗಿ, ನಮ್ಮ ಆಧುನಿಕ ಜೀವನದಲ್ಲಿ ಬಹಳ ಬದಲಾವಣೆಯಾಗಿದ್ದರಿಂದ ಶಾಸ್ತ್ರೀಯ ಸಂಶೋಧನೆಯ ಪ್ರಗತಿಯೂ ಭರದಿಂದ ಆಗಿದ್ದರಿಂದ ಹಳ್ಳಿಗಳಲ್ಲಿಯ ಹಳೆಯ ನಷ್ಟವಾದ ಮತ್ತು ನಷ್ಟವಾಗುತಿರುವ ಉದ್ಯೋಗಗಳ ಬಗ್ಗೆ ಅಷ್ಟೇ ನಾವು ವಿಚಾರ ಮಾಡುತ್ತ ನಡೆದರೆ ಸಾಲದೆಂಬ ಮಾತನ್ನು ನಾನು ಒತ್ತಿ ಹೇಳಬಯಸುತ್ತೇನೆ. ನಮ್ಮ ಜನತೆಯ ಸದ್ಯದ ಬಾಳಿನ ಬಗೆಯನ್ನು ವಿಚಾರಿಸುವದು ಅತ್ಯವಶ್ಯವಾಗಿದೆ; ನಮ್ಮ ಜನರು ಉಪಯೋಗಿಸಹತ್ತಿರುವ ಹೊಸ ಹೊಸ ಪದಾರ್ಥಗಳಬಗ್ಗೆ ಮತ್ತು ಹೊಸ ರೂಪದಲ್ಲಿ ಪರಿವರ್ತಿಸುತಿರುವ ಹಳೆಯ ವಸ್ತುಗಳ ಬಗ್ಗೆ ತಿಳಿದುಕೊಳ್ಳುವದು ಅವಶ್ಯವಾಗಿದೆ. ಈ ವಸ್ತುಗಳಲ್ಲಿ ಯಾವವನ್ನು ಹಳ್ಳಿ ಭಾಗದಲ್ಲಿ ಉತ್ಪಾದಿಸಬಹುದು ಮತ್ತು ಯಾವಾವುವು ಹಳೆಯದಕ್ಕೆ ಪ್ರತಿನಿಧಿಯಾಗಿ ಇರುವವು ಎಂಬುದನ್ನೂ ವಿಚಾರಿಸುವದವಶ್ಯವಾಗಿದೆ. ಅವುಗಳಲ್ಲಿ ಕೆಲವು ಆಯಾ ಸ್ಥಳಗಳಲ್ಲಿಯೆ ಉಪಯೋಗಿಸಲ್ಪಡಬಹುದು. ಆದರೆ ಉಳಿದವುಗಳನ್ನು ನಗರಗಳಿಗೆ ನಿರ್ಯಾತ ಮಾಡುವುದಕ್ಕಾಗಿ ಸಿದ್ಧಪಡಿಸಬಹುದು.

ಅವಶ್ಯಕ ಪದಾರ್ಥಗಳಿಗಾಗಿ ಹಳ್ಳಿಗಳೆಲ್ಲ ಬಹಳಮಟ್ಟಿಗೆ ಸ್ವಾವಲಂಬಿಯಾಗುವುದು ಅವಶ್ಯವಾದ ಧ್ಯೇಯವಾಗಿರತಕ್ಕದ್ದು. ಆದರೆ ಇಷ್ಟರಿಂದಲೆ ಹಳ್ಳಿ ಉದ್ಯೋಗಗಳ ಅವಕಾಶ ಕೊನೆಗೊಳ್ಳಲಾರದು. ಹಳ್ಳಿಗಳಲ್ಲಿಯ ಕಲಾಕುಶಲರನ್ನೆಲ್ಲ ಹೊರಗಟ್ಟುವ ಉದ್ದೇಶವಿಲ್ಲದಿದ್ದರೆ ಮತ್ತು ನಗರ ಮತ್ತು ಪಟ್ಟಣಗಳು ತಮ್ಮ ಜನಸಂಖ್ಯೆ ಮತ್ತು ವಿಸ್ತಾರವನ್ನು ಲೆಕ್ಕಿಸದೆ ಕಾರ್ಯಕ್ಷೇತ್ರವನ್ನು ವಿಸ್ತಾರಗೊಳಿಸಬಾರದೆಂದಿದ್ದರೆ ಹಳ್ಳಿಗಳು ಮತ್ತು ಅವುಗಳ ಸುತ್ತಲಿರುವ 'ಕಸಬಾ'ಗಳುನಗರವಾಸಿಗಳ ಹಲವಾರು ಅವಶ್ಯಕತೆಗಳನ್ನು ಪೂರಯಿಸುವ ಸಣ್ಣ ಸಣ್ಣ ಉದ್ಯೋಗ ಧಂದೆಗಳ ಉಚಿತ ಕೇಂದ್ರಗಳಾಗಿ ಪರಿಣಮಿಸುವಂತೆ ಪ್ರೋತ್ಸಾಹಿಸಬೇಕಾಗಿದೆ. ಯಾವ ವಸ್ತುವಿಗೆ ಅವಶ್ಯವಾದ ಕಚ್ಚಾ ಮಾಲು ಕೇವಲ ಹಳ್ಳಿಯ ಉತ್ಪಾದನೆಯಾಗಿದೆಯೊ ಅಂಥ ವಸ್ತುಗಳೆಲ್ಲ ಹಳ್ಳಿಗಳಲ್ಲಿಯೆ ತಯಾರಾಗುವಂತೆ ಮತ್ತು ಅಲ್ಲಿಂದಲೆ ಪರಿಪೂರ್ಣ ವಸ್ತುವಾಗಿ ನಗರಗಳಿಗೆ ನಿರ್ಯಾತ ಆಗುವಂತೆ ಅವಕಾಶ ಕೊಡಬೇಕು. ಈ ವಿಷಯದಲ್ಲಿ ಮೂಲಭೂತವಾದ ತತ್ವ ಇದಾಗಿರಬೇಕು.

ಉದಾಹರಣಾರ್ಥವಾಗಿ ಬೇರೆ ಬೇರೆ ಪ್ರಕಾರದ ಬಿಸ್ಕೀಟುಗಳು, ಬ್ರೆಡ್ಡುಗಳು, ಉಪ್ಪಿನಕಾಯಿ, ಮುರಬ್ಬಾ, ಮಸಾಲೆ, ಹಪ್ಪಳ, ಮಿಠಾಯಿ, ದಂತಮಂಜನ, ಡಬ್ಬಿಗಳಲ್ಲಿ ತುಂಬಿದ ಹಣ್ಣು, ಹಿಟ್ಟು, ಚರ್ಮದ ವಸ್ತುಗಳು, ವನಸ್ಪತಿಗಳ ಔಷಧಗಳು ಮತ್ತು ಹಳ್ಳಿಗಳಲ್ಲಿ ದೊರೆಯುವ ಇತರ ಅನೇಕ ಪದಾರ್ಥಗಳು ಇದೀಗ ನಗರವಾಸಿಗಳ ಮತ್ತು ಹಳ್ಳಿ ಜನರ ನಿತ್ಯೋಪಯೋಗಿ ವಸ್ತುಗಳಾಗಿವೆ. ಇವುಗಳಲ್ಲಿ ಕೆಲವು ದೊಡ್ಡ ಕೈಗಾರಿಕೆಗಳಿಗೂ ಅವಶ್ಯವಾದ ವಸ್ತುಗಳಾಗಿವೆ. ಇವುಗಳಿಗೆ ಬೇಕಾಗುವ ಕಚ್ಚಾ ಮಾಲು ಹಳ್ಳಿಗಳಲ್ಲಿ ದೊರೆಯುತ್ತದೆ. ಇಲ್ಲವೆ ಸಮೀಪದ ಅರಣ್ಯಗಳೊಳಗಿಂದ ಸಂಗ್ರಹಿಸಲಾಗುತ್ತದೆ. ಹೀಗಿದ್ದರೂ ನಗರಗಳಿಂದಲೆ ಆಯಾ ಉತ್ಪಾದಕ ಹಳ್ಳಿಗಳಿಗೆ ಇವು ಆಯಾತವಾಗಿ ಬರುತ್ತವೆ. ಸರಕಾರದವರು ಇಂಥ ವಸ್ತುಗಳೆಲ್ಲ ಹಳ್ಳಿಗಳಲ್ಲಿಯೆ ಸಿದ್ಧವಾಗುವಂತೆ ಉದ್ಯೋಗ ಧಂದೆಗಳನ್ನು ಹೊರಡಿಸಲು ಅವಕಾಶ ಕಲ್ಪಿಸಿ ಕೊಟ್ಟದ್ದಾದರೆ, ಅವು ಸಮೃದ್ಧ ಸ್ಥಳಗಳಾಗುವವು. ಮತ್ತು ಲಾಭದಾಯಕವಾದ ಉದ್ಯೋಗವನ್ನು ಹುಡುಕಲು ನಗರಗಳಲ್ಲಿ ಒಟ್ಟುಗೂಡುವ ಪ್ರವೃತ್ತಿ ಯುವಕರೆಲ್ಲ ಮಾಯವಾಗುವದು. ಇದನ್ನು ಸಾಧಿಸಬೇಕಾದರೆ ಸರಕಾರದವರ ಸಲಹೆ ಮತ್ತು ಸಹಾಯ ಕೆಳಗೆ ಬರೆದ ರೀತಿಯಲ್ಲಿ ಸಿಕ್ಕಬೇಕೆಂದು ನನಗನಿಸುತ್ತದೆ.

(ಅ) ದೊಡ್ಡ ಪ್ರಮಾಣದ ಕೈಗಾರಿಕೆ ಅದೇ ಬಗೆಯ ಸಣ್ಣ ಪ್ರಮಾಣದ ಕೈಗಾರಿಕೆಯನ್ನು ಕೊನೆಗೆ ಮುರಿಬಡೆಯತಕ್ಕದ್ದೇ ಎಂಬದನ್ನು ಸ್ಪಷ್ಟವಾಗಿ ತಿಳಿದುಕೊಳ್ಳತಕ್ಕದ್ದು. ಅದು ಕೇವಲ 'ಯಾಂತ್ರಿಕ ಶಕ್ತಿ' ಮತ್ತು ಮಾನವ ಅಥವಾ ಪ್ರಾಣಿಶಕ್ತಿಯಲ್ಲಿಯ ಸ್ಪರ್ಧೆಯ ಪ್ರಶ್ನೆಯಷ್ಟೇ ಅಲ್ಲ. ಹಳ್ಳಿಗಳಿಗೆಲ್ಲ ನೀವು ಯಾಂತ್ರಿಕ ಶಕ್ತಿಯನ್ನೇ ಕೊಟ್ಟದ್ದಾದರೂ ಯಾವುದೊಂದು ಕಾರಖಾನೆಯು ಇಂತಿಷ್ಟು ಪ್ರಮಾಣಕ್ಕಿಂತ ಹೆಚ್ಚು ವ್ಯಾಪಕವಾಗಬಾರದೆಂದು ನಿರ್ಬಂಧ ಹಾಕದಿದ್ದರೆ ಹಳ್ಳಿ ಕೈಗಾರಿಕೆ ಅಭಿವೃದ್ಧಿ ಹೊಂದವು. ಆದುದರಿಂದ ಹಳ್ಳಿ ಪ್ರದೇಶದಲ್ಲಿ ಹೊರಡಬಹುದಾದ ಕಾರಖಾನೆಗಳು ಪ್ರಾಂತದಲ್ಲಿ ಎಷ್ಟರಮಟ್ಟಿಗೆ ವ್ಯಾಪಿಸಬಲ್ಲವು ಮತ್ತು ಯಾವ ಮಿತಿಯನ್ನು ಅವು ದಾಟ ಬಾರವು ಎಂಬುದನ್ನು ನಿರ್ಧರಿಸುವದು ಅವಶ್ಯವಾಗಿದೆ. ಹಳ್ಳಿಗಳಲ್ಲಿ ಉದ್ಯೋಗ ಧಂದೆಗಳನ್ನು ಹೊರಡಿಸುವ ಉದ್ದೇಶವಿಟ್ಟುಕೊಂಡಿದ್ದಾದರೆ ಪ್ರಾಂತದಲ್ಲೆಲ್ಲ ನೂರಾರು ಕಾರಖಾನೆಗಳು ಪ್ರಸಾರಹೊಂದಿದ ಚಿತ್ರವನ್ನು ನೀವು ಕಣ್ಮುಂದಿಟ್ಟುಕೊಳ್ಳತಕ್ಕದ್ದು. ಆದುದರಿಂದ ಅವಶ್ಯವಾಗಿ ಅವುಗಳ ಉತ್ಪಾದನ ಶಕ್ತಿಗೆ ಒಂದು ಬಗೆಯ ಮರ್ಯಾದೆಯನ್ನು ಹಾಕಲಿಕ್ಕೆ ಬೇಕಾಗುವದು. ಮತ್ತು ಅವಶ್ಯವೆನಿಸಿದರೆ ಸರ್ವ ಸಾಧಾರಣ ಪರಿಸ್ಥಿತಿಯಲ್ಲಿ ತಯಾರಾದ ವಸ್ತುಗಳ ನಿರ್ಯಾತವನ್ನೂ ಕೆಲ ಪ್ರದೇಶಗಳ ಮಟ್ಟಿಗೆ ಮಾತ್ರ ಮಿತಗೊಳಿಸಬೇಕು. ಆಯಾ ಉದ್ಯೋಗಗಳನ್ನು ಪ್ರತ್ಯ ಪ್ರತ್ಯೇಕವಾಗಿಯೆ ವಿಚಾರ ಮಾಡತಕ್ಕದ್ದು ಅವಶ್ಯವೆಂಬುದು ನಿಶ್ಚಿತ. ಯಾವದೊಂದು ಸಾಮಾನ್ಯ ನಿಯಮವನ್ನು ಈ ಸಂಬಂಧದಲ್ಲಿ ಗೊತ್ತುಪಡಿಸುವದು ಶಕ್ಯವಿಲ್ಲ.

(ಬ) ಗ್ರಾಮೋದ್ಯೋಗ ಇಲ್ಲವೆ ಕೈಗಾರಿಕೆಗಳ ಅಭಿವೃದ್ಧಿಯಲ್ಲಿ ಯಾಂತ್ರಿಕ ಶಕ್ತಿಯಷ್ಟೆ ಅಡ್ಡ ಬರುತ್ತದೆಂದು ನನಗೆನಿಸುವದಿಲ್ಲ. ಇದು ತಪ್ಪಾಗಿದ್ದರೆ ತಿದ್ದಿಕೊಳ್ಳುವೆ. ಹಳ್ಳಿಯ ಕಲಾ ಕುಶಲನಿಗೆ ಸಹಜವಾಗಿ ಸುಲಭ ಕರಾರುಗಳಿಂದ ಬಂಡವಲು ಸಿಕ್ಕುವುದಿಲ್ಲ. ಇದರಿಂದ ಅವನಿಗೆ ಯಾವಾಗಲೂ ಅಡಚಣೆ. ಉದಾಹರಣಾರ್ಥವಾಗಿ ಚರ್ಮ ಹದಮಾಡುವ ಉದ್ಯೋಗವನ್ನೇ ತೆಗೆದುಕೊಳ್ಳಿರಿ. ಹಳ್ಳಿಯಲ್ಲಿಯ ತೊಗಲು ಹದಮಾಡುವ ಒಬ್ಬ ಸಣ್ಣ ಮನುಷ್ಯನಿಗೆ ಇಡೀ ವರ್ಷ ಕೆಲಸ ಮಾಡಬೇಕಾದರೆ ತೊಗಲು, ಸುಣ್ಣ, ಅರಿಷಣ, ತೊಗಟಿ, ಬಣ್ಣ, ಕೆಲ ರಸಾಯನಗಳು ಮತ್ತು ಉಳಿದ ಹಲ ಪದಾರ್ಥಗಳಸಂಗ್ರಹ ಅವನಹತ್ತರಗಳನ್ನು ಸಾಕಷ್ಟಿರಬೇಕಾಗುವದು. ಇವೆಲ್ಲ ಪದಾರ್ಥ ಯೋಗ್ಯ ಸಮಯದಲ್ಲಿಯೆ ಅವನು ಕೊಳ್ಳಬೇಕಾಗುವದು. ಸುಭದ್ರ ವೆಖಾರದಲ್ಲಿ ಅವನ್ನೆಲ್ಲ ಕಾಯ್ದಿಟ್ಟುಕೊಳ್ಳಬೇಕಾಗುವದು. ಪೂರ್ಣ ಬೆಲೆಯನ್ನು ತರುವಂತೆ ತೊಗಲನ್ನು ಅವನು ಹದ ಮಾಡಬೇಕಾದರೆ ಮಡಿಚದೆ ಇಡೀ ತೊಗಲನ್ನೆಲ್ಲ ಒಣ ಹಾಕಲು ಯೋಗ್ಯವಾದ ಪಕ್ಕಾ ಒಣಗಿದ ತಗ್ಗು ಅವಶ್ಯವಾಗಿದೆ. ಈಗಿನಂತೆ ಸ್ನಾನದ ಟಬ್ಬಿಗಿಂತ ಸಣ್ಣ ಮಣ್ಣು ಟಬ್ಬು ಇದ್ದರೆ ನಡೆಯದು. ಇವೆಲ್ಲ ಸಣ್ಣ ಸಣ್ಣ ಪೂರಯಿಕೆಗಳಿಗಾಗಿ ಹಳ್ಳಿ ಚರ್ಮಗಾರನು ಹೊಲೆಬಡ್ಡಿ ತೆಗೆದುಕೊಳ್ಳುವ ಹಳ್ಳಿಯ ಶೆಟ್ಟಿಯನ್ನಾದರೂ ಅವಲಂಬಿಸಬೇಕು. ಇಲ್ಲವೆ ಅವಶ್ಯಕ ವಸ್ತುಗಳನ್ನು ಮುಂಗಡ ಕೊಟ್ಟು ತನ್ನ ಮನಸಿಗೆ ತೋರಿದ ಧಾರಣೆಯಿಂದ ತಯಾರಾದ ಸರಕುಗಳನ್ನು ತೆಗೆದುಕೊಳ್ಳುವ ದಲ್ಲಾಳಿಯನ್ನಾದರೂ ಅವಲಂಬಿಸಬೇಕು. ಹೆಸರಿಗೆ ಅವನು ಸ್ವತಂತ್ರ ಕಲಾಕುಶಲನಾಗಿದ್ದಾನೆ. ಬಂಡವಲುಗಾರನ ಕಾರಖಾನೆಯಲ್ಲಿ ಇದೇ ಬಗೆಯ ಕೆಲಸ ಮಾಡುವ ಕೆಲಸಗಾರನಿಗಿಂತ ಕಡಮೆ ಗಳಿಕೆ ಅವನದಾಗಿರುವದು. ಅವನೊಬ್ಬ ಸ್ವತಂತ್ರ ಉದ್ಯೋಗಸ್ಥನೆಂದು ಕರೆಯುವದು ಅನುಚಿತವೆ. ನಿಜವಾಗಿ ಅವನೊಬ್ಬ ತುಂಡು ಕೆಲಸದಲ್ಲಿ ತೊಡಗಿದ ಕೂಲಿಕಾರ ಮಾತ್ರ.

ತದ್ವಿರುದ್ಧವಾಗಿ ದೊಡ್ಡ ಕೈಗಾರಿಕೆಗಾರನು ಪದಾರ್ಥಗಳ ಉತ್ಪತ್ತಿಯನ್ನು ಬೇಗನೆ ಮತ್ತು ಹೆಚ್ಚು ಪ್ರಮಾಣದಲ್ಲಿ ಮಾಡುವನಲ್ಲದೆ ಸುಲಭದರದಲ್ಲಿ ಅವನಿಗೆ ಬೇಕಾದಷ್ಟು ಬಂಡವಲು ಸಿಕ್ಕುವುದರಿಂದ ಹಳ್ಳಿ ಉದ್ಯೋಗಸ್ಥನಿಗಿಂತ ಅವನಿಗೆ ಎಲ್ಲ ಬಗೆಯ ಅನುಕೂಲತೆಗಳು ಹೆಚ್ಚಿಗಿರುವವು. ವ್ಯಾಪಾರದಲ್ಲಿಯೂ ಅವನಿಗೆ ಹೆಚ್ಚಿನ ಅನುಕೂಲತೆ ಸಿಕ್ಕುವದು. ಹಳ್ಳಿಗನಿಗೆ ಬೇಕಾದುದಕ್ಕಿಂತ ಹೆಚ್ಚು ಬಂಡವಲು ಮತ್ತು ಚರ್ಮ ಹೆಚ್ಚಿಗೆ ಬೇಕಾಗಿದ್ದರೂ ಆ ಬಂಡವಲದ ಬಹ್ವಂಶ ಪರದೇಶಿ ಯಂತ್ರ ಮತ್ತು ಸಾಮುಗ್ರಿಗಳನ್ನು ಕೊಳ್ಳುವದಕ್ಕೆ ಉಪಯೋಗಿಸಬೇಕಾಗಿದ್ದರೂ ಅವನಿಗೆ ಹಳ್ಳಿಯಲ್ಲಿಯ ಚರ್ಮ ಹದ ಮಾಡುವವನಿಗಿಂತ ಅನುಕೂಲತೆಗಳು ಹೆಚ್ಚಿಗಿರುವವು.

ಮೇಲೆ ವಿವರಿಸಿದ್ದೆಲ್ಲ ಸರಿಯಾಗಿದ್ದರೆ, ಹಳ್ಳಿ ಉದ್ಯೋಗ ಧಂದೆಗಳಿಗೆ ಪ್ರೋತ್ಸಾಹನೆಕೊಡುವದವಶ್ಯವಾಗಿದ್ದರೆ ಧ್ಯೇಯಸಾಧನೆಗಾಗಿ ಸುಲಭದರದಿಂದ ಬಂಡವಲು ಸಿಕ್ಕುವಂತೆ ಯೋಜಿಸುವದವಶ್ಯ. ಸುಲಭದರಗಳೆಂದರೆ ದೊಡ್ಡಕೈಗಾರಿಕೆಯವರಿಗೆ ಯಾವ ದರದಿಂದ ಬಡ್ಡಿ ಸಿಕ್ಕುತ್ತದೆಯೊ ಅದಕ್ಕಿಂತ ಕಡಿಮೆ ಬಡ್ಡಿಯಿಂದ ಎಂದರ್ಥ. ವೈಯಕ್ತಿಕವಾಗಿ,ಬಡ್ಡಿ ತೆಗೆದುಕೊಳ್ಳಬೇಕೆಂಬ ತತ್ವಕ್ಕೇ ನನ್ನ ವಿರೋಧ; ಆದರೆ ಆ ಬಡ್ಡಿಯನ್ನು ಇಲ್ಲಿ ಅನ್ವಯಿಸುವ ಇಚ್ಛೆ ನನಗಿಲ್ಲ. ಆದರೆ ಸದ್ಯದಲ್ಲಿಯಂತೆ ಸಣ್ಣ ಕೈಗಾರಿಕೆಯವರಿಗಿಂತ ದೊಡ್ಡ ಕೈಗಾರಿಕೆಯವರಿಗೆ ಸುಲಭದರದಿಂದ ಬಡ್ಡಿ ಸಿಕ್ಕಹತ್ತಿದರೆ ಅವು ಸಣ್ಣ ಕೈಗಾರಿಕೆಗಳನ್ನು ಕೊನೆಯಲ್ಲಿ ಕೊಂದು ಹಾಕುವವೆಂದು ನನಗೆ ಬಲವಾಗಿ ಎನಿಸುತ್ತದೆ. ಸಹಕಾರ ಸಂಘಗಳಲ್ಲಿ ಕೂಡ ಬಂಡವಲುದಾರ ಕಂಪನಿಗಳಿಗಿಂತ ಸುಲಭದರಗಳಲ್ಲಿ ಬಂಡುವಲು ಸಿಕ್ಕುವುದಿಲ್ಲೆಂದು ನನಗೆನಿಸುತ್ತದೆ. ಯಾವುದೊಂದು ಚಪ್ಪರದಲ್ಲಿ ಕೆಲಸಗಾರರನ್ನು ತೆಗೆದುಕೊಂಡು ಹೋಗಿ ಕೆಲಸಕ್ಕೆ ಹಚ್ಚುವವನಿಗಿಂತ ಸ್ವತಃ ಕೈಯಿಂದ ಕೆಲಸ ಮಾಡುವವನಿಗೆ ಯಾವಾಗಲೂ ಹೆಚ್ಚಿನ ಮನ್ನಣೆ ಕೊಡಬೇಕಾದುದು ಅವಶ್ಯ.

ತನ್ನ ಉದ್ಯೋಗದ ಒಡೆಯನೇ ತಾನಾಗಿರದ್ದರಿಂದ ತನ್ನ ವಸ್ತುವನ್ನು ಹೆಚ್ಚು ಪರಿಪೂರ್ಣ ಮತ್ತೂ ನಯವಾಗಿ ಮಾಡಬೇಕೆಂಬಲ್ಲಿ ಅವನು ಉತ್ಸಾಹಿತನಾಗುವದಿಲ್ಲ. ಗ್ರಾಮಸೇವಕರು ಎಷ್ಟೇ ಪ್ರಯತ್ನಿಸಿದರೂ ಸುಧಾರಿಸಿದ ಪದ್ಧತಿಯಿಂದ ಕೆಲಸ ಕಲಿಯುವದರ ಕಡೆಗೂ ಅವನು ಗಮನಿಸುವದಿಲ್ಲ.

(ಕ) ಈ ರೀತಿ ಕಲಾಕುಶಲನಿಗೆ ಸೌಕರ್ಯಗಳು ಒದಗಿಸಲ್ಪಟ್ಟರೆ ಮತ್ತು ಅವನು ಪ್ರಾಮಾಣಿಕ ಹಾಗು ದಕ್ಷನಾಗಿದ್ದರೆ, ತನ್ನ ವ್ಯವಹಾರವನ್ನು ನಡೆಸುವದಕ್ಕೆ ಹಣದ ಕೊರತೆಯುಂಟೆಂದು ಹೇಳಿ ಹಿಂದೆ ಮುಂದೆ ನೋಡಬೇಕಾದ ಪ್ರಸಂಗ ಅವನಿಗೆ ಬರುವದಿಲ್ಲ. ವಸ್ತುಗಳ ತಯಾರಿಕೆಯಲ್ಲಿ ಆಧುನಿಕ ಸುಧಾರಿಸಿದ ಪದ್ಧತಿಯ ಶಿಕ್ಷಣ ಅವನಿಗೆ ಸಿಕ್ಕುವದು ಎರಡನೆಯ ವಿಷಯವಾಗಿದೆ. ಹಳ್ಳಿ ಉದ್ಯೋಗವೆಂದ ಕೂಡಲೆ ಸದ್ದಾಮುದ್ದಾ ಮಾಡಿದ ವಸ್ತುಗಳೆಂದು ಭಾವಿಸಬಾರದು. ಹಳ್ಳಿಗರು ಅಥವಾ ಹಳ್ಳಿ ಉದ್ಯೋಗ ಧಂದೆಗಳ ಪುರಸ್ಕರ್ತರು ಅದ ಮಾತ್ರಕ್ಕೆ ಸದ್ದಾ ಮುದ್ದಾ ಅಥವಾ ನಯವಿಲ್ಲದ ವಸ್ತುಗಳಿಂದಲೆ ಸಂತುಷ್ಟರಾಗಬೇಕೇಕೆ? ಕಾರಖಾನೆಗಳಲ್ಲಿ ತಯಾರಾಗುತಿದ್ದ ವಸ್ತುಗಳು ಹೆಚ್ಚು ಶ್ರೇಷ್ಠವಾಗಿದ್ದ ಕಾಲವೊಂದೂ ಇದ್ದಿತು. "ಅಗ್ಗ ಮತ್ತು ಕೆಟ್ಟ" ವಸ್ತುಗಳೆಂದರೆ ಕಾರಖಾನೆಗಳಲ್ಲಿ ತಯಾರಾದ ವಸ್ತುಗಳು ಎಂದು ಹಳ್ಳಿಗಳಲ್ಲಿ ತಯಾರಾದ ಮತ್ತು ಗ್ರಾಮ ಕೈಗಾರಿಕೆಗಳ ವಸ್ತು ಅಲ್ಲ ಎಂಬ ವಾಡಿಕೆಯೂ ಇತ್ತು.ಆದರೆ ಆ ಪರಿಸ್ಥಿತಿ ಈಗ ಇಲ್ಲ. ತದ್ವಿರುದ್ಧವಾಗಿ ಈಗ ಹಳ್ಳಿಯ ವಸ್ತುಗಳೆಂದರೆ ಬಹಳ ತುಟ್ಟಿ ಮತ್ತು ಸದ್ದಾ ಮುದ್ದು ಎಂಬ ವಾಡಿಕೆ ಬಿದ್ದಿದೆ. ಆ ಕೀಳ್ಮಟ್ಟಕ್ಕೆ ಅವು ಇಳಿದಿವೆ. ಸ್ವಚ್ಛ, ಆರಿಸಿದ ಮತ್ತು ಯೋಗ್ಯ ರೀತಿಯಿಂದ ವರ್ಗೀಕರಿಸಿದ ಕಚ್ಚಾ ಮಾಲು ವ್ಯವಸ್ಥಿತ ರೀತಿಯಲ್ಲಿಡಲ್ಪಟ್ಟ ಉಪಕರಣಗಳು, ಅವುಗಳನ್ನು ಶಾಸ್ತ್ರೀಯ ರೀತಿಯಿಂದ ಉಪಯೋಗಿಸುವದು, ಆಕಾರ, ಗುಣ, ಸಂಖ್ಯೆಯಲ್ಲಿ ನಿಯಮಬದ್ಧತೆ, ವಸ್ತು ತಯಾರಾಗುವ ಪ್ರತಿಯೊಂದು ಮಹತ್ವದ ಮಟ್ಟದಲ್ಲಿ ಯೋಗ್ಯ ಪರೀಕ್ಷೆ, ಕೆಲಮಟ್ಟಿಗೆ ವಸ್ತುಗಳ ಸೌಂದರ್ಯ ಮೊದಲಾದ್ದನ್ನು ಈವರೆಗೆ ನಮ್ಮ ಔದ್ಯೋಗಿಕ ಚಳವಳಿಗಳಲ್ಲಿ ಬಹಳ ಮಟ್ಟಿಗೆ ಅಲಕ್ಷಿಸಲಾಗಿತ್ತು. ತಜ್ಞರೆಂದೆನಿಸಿಕೊಳ್ಳುವವರು ಕೂಡ ಅನೇಕ ಸಲ ಈ ವಿಷಯಗಳಲ್ಲಿ ಅಜ್ಞಾನವನ್ನು ಪ್ರದರ್ಶಿಸುತ್ತಾರೆ; ಇಷ್ಟೇ ಅಲ್ಲ, ಅವುಗಳ ಪರಿಜ್ಞಾನವು ಕೂಡ ಅವರಿಗಿರುವದಿಲ್ಲ. ತಮ್ಮ ಕೆಲಸದ ಹದ ಗೊತ್ತಿದ್ದ ಮತ್ತು ಹಳ್ಳಿ ಕಲಾಕುಶಲರಿಗೆ ಪ್ರಾತ್ಯಕ್ಷಿಕೆಗಳನ್ನು ತೋರಿಸಲು ಸಮರ್ಥರಿದ್ದ ಶಿಕ್ಷಕರು ಮತ್ತು ಪರೀಕ್ಷಕರ ಮೇಲ್ವಿಚಾರಣೆ ಅತ್ಯವಶ್ಯವಾಗಿದೆ. ಈ ಬಗೆಯ ಕೆಲಸವನ್ನು ಸಂಘಟಿಸಿ ಸರಕಾರದವರು ಉದ್ಯೋಗಗಳಿಗೆ ಸಹಾಯವನ್ನು ಸಲ್ಲಿಸಬೇಕು. ಪರೀಕ್ಷೆಗೆ ಬಂದ ವಸ್ತುಗಳನ್ನು ಮಾನ್ಯ ಮಾಡುವದು ಇಲ್ಲವೆ ನಿರಾಕರಿಸುವದು ಇಷ್ಟೇ ಪರೀಕ್ಷಕರ ಕೆಲಸವಾಗಿರದೆ ಉತ್ತಮ ವಸ್ತುಗಳನ್ನು ಸಿದ್ಧಪಡಿಸಲು ತರಬೇತಿಹೊಂದುತಿರುವ ಕೆಲಸಗಾರರಿಗೆ ಅವಶ್ಯಕ ಸಲಹೆಯನ್ನು ಕೊಡಬೇಕು.

ಈ ಬಗೆಯ ಕೆಲಸ ಮಾಡಲಿಕ್ಕೆ ಯೋಗ್ಯರಾಗಿರುವ ಸಾಕಷ್ಟು ಜನರು ಸಿಕ್ಕುವರೆ ಎಂಬ ಬಗ್ಗೆ

—೫ನೇ ಪುಟಕ್ಕೆ

## ಗ್ರಾಮೋದ್ಯೋಗಗಳು ಮತ್ತು ಸರಕಾರ

[ ೭ನೇ ಪುಟದಿಂದ ]

ನನಗೆ ಆಶ್ಚರ್ಯ. ಇದಕ್ಕಾಗಿ ಈ ಬಗೆಯ ಬಹಳ ಜನ ಅಧಿಕಾರಿಗಳು ಅವಶ್ಯವಿದ್ದು ಅವರನ್ನು ತರಬೇತು ಮಾಡಬೇಕಾಗಿದೆ. ಇಂಥ ಪರಿಚಿತ ಸಂಘಟಕರಿಲ್ಲದೆ ಬರಿಯೋಜನೆಗಳು ಇಲ್ಲವೆ, ಅಂದಾಜ ಪತ್ರಿಕೆಗಳಿಂದ ಉದ್ದಿಷ್ಟವು ಯಶಸ್ವಿಯಾಗದು.

(ಡ) ಅನಂತರ ಗ್ರಾಮೋದ್ಯೋಗಗಳಿಗೆ ಸಂರಕ್ಷಣೆಯನ್ನು ಕೊಡಬೇಕು. ೧) ಮೂಲ ಸಾಮಗ್ರಿಗಳಿಂದ ತಯಾರಾದ ವಸ್ತುಗಳನ್ನು ಹೊರದೂಡಲು ಪ್ರಯತ್ನಿಸುತಿರುವ ಕೃತ್ರಿಮ ಬಟ್ಟೆಯಂಥ ಸಾಂಯೋಗಿಕ ಪದಾರ್ಥಗಳ ಪ್ರಸಾರವಾಗದಂತೆ ಸಂರಕ್ಷಣೆ ದೊರೆಯಬೇಕು. ೨) ಹೆಚ್ಚು ಧಾರಣೆಯ ಆಶೆತೋರಿ ಆಯಾ ವಸ್ತುಗಳನ್ನು ಅಥವಾ ಕೃತ್ರಿಮ ಪದಾರ್ಥಗಳನ್ನು ಉತ್ಪಾದಕರ ಉಪಯೋಗಕ್ಕೆ ಸಿಕ್ಕದಂತೆ ಮಾಡುವ ಬಂಡವಲುದಾರ ಸಂಸ್ಥೆಗಳ ಪ್ರವೃತ್ತಿಯನ್ನು ಇಲ್ಲದಂತೆ ಮಾಡುವದು ಈ ಪ್ರವೃತ್ತಿಯಿಂದ ಅನೇಕಸಲ ಔಂಸು ಹಾಲು ಸಹ ಕರುವಿನ ಹೊಟ್ಟೆಯಲ್ಲಿ ಹೋಗುವದಿಲ್ಲ. ಅಥವಾ ಆಕಳು ಎಮ್ಮೆಯ ಒಡೆಯರ ಮಕ್ಕಳಿಗೆ ಕೂಡ ಹಾಲು ದೊರೆಯುವದಿಲ್ಲ. ಆ ಹಾಲನ್ನು ಹೆಚ್ಚು ಧಾರಣೆಗೆ ಮಾರಾಟ ಮಾಡುವದಕ್ಕಾಗಿ ನಗರಗಳಿಗಾದರೂ ಕಳಿಸಲಾಗುತ್ತದೆ. ಇಲ್ಲವೆ ಖವಾ, ಪೇಡೇ, ವಡೆ ಮುಂತಾದ್ದನ್ನು ಮಾಡಲಿಕ್ಕೆ ಉಪಯೋಗಿಸಲಾಗುತ್ತದೆ ಆಹಾರವಲ್ಲದೆ ಇತರ ಚೈನೀ ಪದಾರ್ಥಗಳನ್ನು ಮಾಡಲಿಕ್ಕೆ ಹಾಲನ್ನು ಪಯೋಗಿಸಲಾಗುತ್ತದೆ. ಔದ್ಯೋಗೀಕರಣದ ಈ ಅಭಿಪ್ರಾಯ ಅಪಾಯಕಾರಕವಾಗಿದೆ. ಆದರೆ ಧರ್ಮಾರ್ಥ ಮತ್ತು ಪರೋಪಕಾರ ಉದ್ದೇಶಗಳನ್ನಿಟ್ಟುಕೊಂಡು ಸಂಘಟಿಸಲ್ಪಟ್ಟ ಔದ್ಯೋಗಿಕ ಕಾರಖಾನೆಗಳು ಕೂಡ ಇದರಿಂದ ಅಲಿಪ್ತವಾಗಿರುವದಿಲ್ಲ. ಖಾಸಗಿ ಒಡೆತನವೆಂಬುದು ಬಂಡವಲುಗಾರಿಕೆಗೆ ಎರಡನೆ ಹೆಸರು ಮಾತ್ರ. ಸಂಸ್ಥೆಯನ್ನು ಶಕ್ಯವಿದ್ದಷ್ಟು ಹೆಚ್ಚು ಲಾಭದಾಯಕ ಮಾಡುವದರಕಡೆಗೆ ಹೆಚ್ಚು ಲಕ್ಷ ಕೊಡಲಾಗುತ್ತದೆ. ಇದರಿಂದಲೆ ಜನಸಾಮಾನ್ಯರಿಗೆ ತೀರ ಅವಶ್ಯವಿದ್ದ ಪದಾರ್ಥಗಳು ಕೂಡ ಸಿಕ್ಕದಂತಾಗುತ್ತವೆ.

ಇದನ್ನು ಹೇಗೆ ಪರಿಹರಿಸಬಲ್ಲೆವೆಂಬುದು ವಿಚಾರಿಸತಕ್ಕ ಉಚಿತ ಪ್ರಶ್ನೆಯಾಗಿದೆ.

೧) ಕೆಲವು ಸಲ ಈ ಪ್ರಶ್ನೆ ನಮ್ಮನ್ನು ಹಿಂದಿ ಸ್ವರಾಜ್ಯ ಸರಕಾರದ ಮಂದಿರದ ಆವಾರಕ್ಕೆ ಮುಟ್ಟಿಸುತ್ತದೆ. ಉದ್ಯೋಗ ಧಂದೆಗಳ ವಿಕೇಂದ್ರೀಕರಣ, ದೇಶದ ಸರಕಾರದ ವಿಕೇಂದ್ರೀಕರಣದ ಜತೆಯಲ್ಲಿಯೇ ಸಾಗತಕ್ಕದು. ಸಂದರ್ಭದಲ್ಲಿ ಈಗಲೂ ಸರಕಾರದ ವಿಕೇಂದ್ರೀಕರಣವಿದೆ. ಆದರೆ ಅದು ಆಡಳಿತ ಕಾರ್ಯದಲ್ಲಿಯ ವಿಕೇಂದ್ರೀಕರಣ ಅಂದರೆ ಸರ್ವಸಮರ್ಥ ಕೇಂದ್ರದಿಂದ ಧೋರಣ ಮತ್ತು ಹುಕುಮುಗಳು ಹೊರಬೀಳುವವು. ವಿಕೇಂದ್ರೀಕೃತ ಈ ಸರಕಾರಗಳು ಅವನ್ನು ಕಾರ್ಯಕಾರಿ ಮಾಡುವವು. ಹಳ್ಳಿಗೆ ಇಲ್ಲವೆ ಯೋಗ್ಯ ಆದರೆ ಸಣ್ಣ ಘಟಕಗಳಿಗೆ ಉಪಕ್ರಮದ ಅಧಿಕಾರವಿಲ್ಲ. ಹಳ್ಳಿಗಳ ಅಭಿವೃದ್ಧಿಯಾಗಬೇಕೆಂದಿದ್ದರೆ ಈ ಅಧಿಕಾರ ಅವುಗಳಿಗೆ ಬರಲಿಕ್ಕೆಬೇಕು"

೨) ತಮ್ಮ ಜೀವನದ ಯೋಜನೆಯನ್ನು ತಾವೇ ಮಾಡಬಲ್ಲರು. ಬಂಡವಲು, ವಾಹನ ಸೌಕರ್ಯ ಮತ್ತು ಉಳಿದ ಸೌಕರ್ಯಗಳನ್ನೆಲ್ಲ ಒದಗಿಸಿ ಕೊಡಲು ಸರಕಾರದ ಸಹಾಯಸಿಕ್ಕುವದು. ಹಕ್ಕಿನಿಂದಲೆ ಈ ಬಗೆಯ ಸಹಾಯ ತಮಗೆ ದೊರೆಯುತ್ತದೆ, ಏನೋ ಉಪಕಾರವೆಂದು ಇಲ್ಲವೆ ಪಾರಿತೋಷಕವೆಂದು ಇವೆಲ್ಲ ದೊರೆವುದಿಲ್ಲೆಂದು ಮುಂತಾಗಿ ಜನಸಾಮಾನ್ಯರಿಗೆ ಎನಿಸಬೇಕು. ಮಳೆ ಮತ್ತು ಬಿಸಿಲಿನ ಸಹಾಯದಂತೆಯೆ ಈ ಸಹಾಯ ಸಿಕ್ಕೇ ಸಿಕ್ಕುವುದೆಂದು ಅವರ ಮನವರಿಕೆಯಾಗಬೇಕು. ಆಕಲುಷಿತ, ಪೂರ್ಣ ತರಬೇತಿ ಹೊಂದಿದ ವಿನಯಶೀಲ ಮತ್ತು ವಿಶ್ವಾಸ ಹುಟ್ಟಿಸುವಂಥ ಸಾರ್ವಜನಿಕ ಸೇವಕರು ಜನತೆಯ ಆರ್ಥಿಕ ಪುನರುಜ್ಜೀವನಕ್ಕೆ ಅಪರಿಹಾರ್ಯರಾಗಿದಾರೆ. ಸರಕಾರಿ ನವಕರರ ಶೀಲದ ಮಟ್ಟವನ್ನು ಎತ್ತರಿಸುವದಕ್ಕೆ ಎಲ್ಲ ಬಗೆಯ ಪ್ರಯತ್ನ ಮಾಡಬೇಕು. ಮತ್ತು ತಾವು ಜನರ ಮೇಲಿನ "ಅಮಲದಾರ" ರೆಂಬ ಅವರಲ್ಲಿಯ ಸದ್ಯದ ಮನೋಭಾವನೆಯನ್ನು ಬದಲಿಸಿ ಸಾರ್ವಜನಿಕರ ನಿಜಸೇವಕರನ್ನಾಗಿ ಅವರನ್ನು ಮಾರ್ಪಡಿಸಬೇಕು. ಅವರ ನೋಕರಿ ಸ್ಥಳಿಕ ಇಲ್ಲವೆ ಪ್ರಾಂತಿಕ ಪಕ್ಷ ಗುಂಪುಗಳ ಕೃಪಾಕಟಾಕ್ಷಕ್ಕೆ ಒಳಗಾಗಿರಬಾರದು. ಆದರೆ ಅದೇ ಕಾಲಕ್ಕೆ ಅವರು ಸರ್ವಾಧಿಕಾರಿಗಳಾಗಿರದೆ ಸ್ಥಳಿಕ ಆಡಳಿತಕ್ಕೆ ಹೊಣೆಗಾರರಾಗಿರಲಿಕ್ಕೆ ಬೇಕು.

(೩) ಜನಸಾಮಾನ್ಯರ ವಿಶೇಷತಃ ರಾಜಕಾರಣಿಗಳ ಶೀಲದ ಮಟ್ಟವನ್ನು ಸಮಕಾಲಿಕವಾಗಿ ಏರಿಸದಿದ್ದರೆ ಮೇಲೆ ಹೇಳಿದ್ದು ಶಕ್ಯವಾಗಲಾರದು. ಪಂಗಡಗಳ ಮತ್ತು ಗುಂಪುಗಳ ಹಿತಸಂಬಂಧಗಳಲ್ಲಿ ಅಧಿಕಾರದ ಕೈವಾಡ ನಡೆಸುವದರ ಕೆಡಕು ಸಾರ್ವಜನಿಕ ಜೀವನವನ್ನು ಹದಗೆಡಿಸುತ್ತದೆ. ಮತ್ತು ಅದು ಇರುವ ವರೆಗೆ ಒಳಿತು ಅದರಿಂದ ಬಹಳ ಉಂಟಾಗಲಾರದು.

೪) ಸಹಕಾರ ಚಳವಳಿ, ಪಾಶ್ಚಾತ್ಯರಲ್ಲಿ ಎಷ್ಟೋ ಯಶಸ್ವಿಯಾಗಿದ್ದರೂ ಮೇಲೆ ವಿವರಿಸಿದ್ದೆಲ್ಲ ಇಲ್ಲದ್ದರಿಂದಲೇ ನಮ್ಮ ದೇಶದಲ್ಲಿ ಅಷ್ಟು ಯಶಸ್ವಿಯಾಗಲಿಲ್ಲ. ಹಳ್ಳಿ ಇಲ್ಲವೆ ವಿಕೇಂದ್ರೀಕೃತ ಸ್ವರಾಜ್ಯ ಸಹಕಾರ ಸಂಘಗಳಿಗೆ ಪ್ರತಿನಿಧಿಯಾಗಲಾರದು. ಹಳ್ಳಿಯಲ್ಲಿಯ ಔದ್ಯೋಗಿಕ ಪ್ರಯತ್ನಗಳಿಗೆಲ್ಲ ಅದು ಮುಖ್ಯ ತಿರುಗಣಿಗೂಟವಾಗಿರಬೇಕು.

೫) ಹಳ್ಳಿ ಯಂತ್ರಗಳು ಮತ್ತು ಯಂತ್ರೋಪಕರಣಗಳಲ್ಲಿ ಬಹಳ ಸುಧಾರಣೆಯಾಗುವದರ ಕಡಿಗೆ ಹೆಚ್ಚು ಲಕ್ಷಕೊಡಬೇಕಾಗುವದು ಅವಶ್ಯವಾಗಿದೆ. ಈ ದಿಸೆಯಲ್ಲಿ ಏಕಕಾಲಕ್ಕೆ ಎರಡು ಪರಸ್ಪರ ವಿರುದ್ಧ ಚಳವಳಿಗಳು ನಡೆದಿವೆ. ಯಂತ್ರ ಮತ್ತು ಯಂತ್ರೋಪಕರಣಗಳನ್ನು ಶಕ್ಯವಿದ್ದಷ್ಟು ಸಾದಾ ಮಾಡಬೇಕೆಂಬದನ್ನು ಮತ್ತು ಪ್ರಾಚೀನ ಕಾಲದಿಂದ ಬಂದ ಸಾದಾ ಯಂತ್ರೋಪಕರಣಗಳನ್ನು ಬಿಡಬೇಕೆಂಬದನ್ನೂ ಒಂದು ವರ್ಗದವರು ಪ್ರತಿಪಾದಿಸುತ್ತಾರೆ. ಅವಶ್ಯಕ ಪದಾರ್ಥಗಳ ಉತ್ಪಾದನೆಯಲ್ಲಿ ಯಂತ್ರ ಮತ್ತು ಯಂತ್ರೋಪಕರಣಗಳು ಸಿಕ್ಕದಿದ್ದರೆ ನಿಃಸಹಾಯಕರೆಂದು ಜನರಿಗೆ ಎನಿಸಬಾರದೆಂಬ ದೃಷ್ಟಿಯಿಂದ ಮತ್ತು ಸಿದ್ಧ ಯಂತ್ರೋಪಕರಣಗಳು ಸಿಕ್ಕುವ ದಾರಿ ನೋಡದೆ ಹಳ್ಳಿ ಉದ್ಯೋಗಗಳನ್ನು ಪ್ರಾರಂಭಿಸಬಹುದೆಂಬ ಭಾವನೆಯನ್ನು ಅವರಲ್ಲಿ ಉಂಟುಮಾಡುವ ದೃಷ್ಟಿಯಿಂದ ಇದೆಲ್ಲ ಉಚಿತವೆ. ಉಪಕರಣಗಳಿಗಿಂತ ಮನಸ್ಸೆ ಮಹತ್ವದ್ದು.

ಕಾರ್ಯಕರ್ತನಿಗೆ ಉತ್ತಮೋತ್ತಮ ಯಂತ್ರ ಮತ್ತು ಯಂತ್ರೋಪಕರಣಗಳನ್ನು ಕೊಟ್ಟು ಅವನ ಉತ್ಪಾದಕ ಶಕ್ತಿಯನ್ನು ಹೆಚ್ಚಿಸಬೇಕೆಂಬದರ ಮೇಲೆ ಎರಡನೇ ವರ್ಗದವರು ಹೆಚ್ಚು ಜೋರು ಕೊಡುತಿರುವರು. ಆ ಯಂತ್ರೋಪಕರಣಗಳು ಹೆಚ್ಚು ತೊಡಕಿನವಿದ್ದು ಅವುಗಳನ್ನು ತಯಾರಿಸಲಿಕ್ಕೆ ಇಲ್ಲವೆ ದುರಸ್ತಿಗೆ ಕಾರಖಾನೆಗಳಿಗೆ ಹೋಗಬೇಕಾಗಿ ಬಂದರೂ ಇವೆಲ್ಲ ಯಂತ್ರ ಮತ್ತು ಯಂತ್ರೋಪಕರಣಗಳು ಬೇಕೆಂದು ಅವರ ಅಭಿಪ್ರಾಯ.

ಈ ಎರಡೂ ಬಗೆಯ ಚಳವಳಿ ಅವಶ್ಯವೆಂದು ನನಗನಿಸುತ್ತದೆ ಆದರೆ ಕೊನೆಯಲ್ಲಿ ಎರಡನೆಯದು ಹೆಚ್ಚು ಮಹತ್ವದ್ದು ಮತ್ತು ಶಾಶ್ವತವಾಗುವದು. ನಾವು ನುರಿಸುತಿರುವ ವಿವಿಧ ವಸ್ತುಗಳ ಸಂಖ್ಯೆಯ ಹೆಚ್ಚಳವಿಷ್ಟೇ ಅಲ್ಲ, ಅದನ್ನು ನುರಿಸುವ ಪ್ರಮಾಣವೂ ಹೆಚ್ಚಿದೆ ಆದುದರಿಂದ ಆಯಾ ವಸ್ತುಗಳು ಹೆಚ್ಚು ಪ್ರಮಾಣದಲ್ಲಿ ತಯಾರಾಗಬೇಕೆಂಬುದನ್ನು ನಾವು ಮರೆಯತಕ್ಕದ್ದಲ್ಲ. ಇದನ್ನು ಸಾಧಿಸಬೇಕಾದರೆ ಯಾಂತ್ರಿಕಶಕ್ತಿಯಿಂದನಡೆವ ಯಂತ್ರಗಳ ಉಪಯೋಗವನ್ನು ಎಷ್ಟರಮಟ್ಟಿಗೆ ಮಾಡಲಿಕ್ಕೆ ಬೇಕೆಂಬದನ್ನು ಈಗಲೆ ಹೇಳಲಿಕ್ಕೆ ಬರುವದಿಲ್ಲ. ಪರದೇಶೀ ಪೇಟಿಯನ್ನು ವಶಪಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ ನಮ್ಮದಿರದೆ- ನಮ್ಮ ಜನರಿಗೆ ಪೂರೈಸದೆ ಅನೇಕಸಲ ಹೀಗೆ ಮಾಡಲಾಗುತ್ತದೆ- ನಮ್ಮ ದೇಶವನ್ನೆ ಸ್ವಾವಲಂಬಿಯನ್ನಾಗಿ ಮಾಡಿ ಮೊದಲು ನಮ್ಮಲ್ಲಿಯ ನಿರುದ್ಯೋಗತೆಯನ್ನು ಹೋಗಲಾಡಿಸಬೇಕು. ಅನೇಕ ವಸ್ತುಗಳನ್ನು ಸಿದ್ಧಪಡಿಸುವಾಗ ಯಾಂತ್ರಿಕ ಶಕ್ತಿಯಿಂದ ನಡೆವ ಯಂತ್ರಗಳನ್ನು ನಾವು ಬಹಿಷ್ಕರಿಸಬಹುದಾಗಿದೆ. ಮನುಷ್ಯ ಶಕ್ತಿಯನ್ನೆಲ್ಲ ಉಪಯೋಗಿಸಿದರೂ ಬೇಡಿಕೆಯನ್ನು ಪೂರಯಿಸುವದು ಶಕ್ಯವಾಗಲೊಲ್ಲದೆಂದು ಗೊತ್ತಾದನಂತರವೆ ಯಾಂತ್ರಿಕ ಶಕ್ತಿಯ ಉಪಯೋಗದ ಪ್ರಶ್ನೆ ಬರುತ್ತದೆ. ಆದುದರಿಂದ ಮನುಷ್ಯ ಮತ್ತು ಪ್ರಾಣಿಗಳಿಂದ ಚಲಿಸುವ ಯಂತ್ರಗಳ ಉತ್ಪಾದನ ಶಕ್ತಿಯನ್ನೆ ಎಂತು ಹೆಚ್ಚಿಸಬೇಕೆಂಬ ಬಗ್ಗೆ ಎಲ್ಲ ಬಗೆಯ ಸಂಶೋಧನೆಯ ಜ್ಞಾನವನ್ನು ಪಯೋಗಿಸಬೇಕು. ಸದ್ಯಕ್ಕಂತೂ ಇದು ಅತ್ಯಂತ ಅವಶ್ಯವಾಗಿದೆ. ಈ ಮರ್ಯಾದೆಯಲ್ಲಿ ಶಕ್ಯವಿದ್ದಷ್ಟು ಅದನ್ನು ಪರಿಪೂರ್ಣಗೊಳಿಸುವಲ್ಲಿ ಯಾವದೆ ಬಗೆಯ ಅಪಾಯವಿಲ್ಲ.

ಸಶಕ್ತರಿಗೆ ಸಹಾಯಕವಾಗದಿದ್ದರೂ ಸಶಕ್ತರ ಮಟ್ಟಕ್ಕೆ ಅಶಕ್ತರನ್ನ ಬಂದು ಮುಟ್ಟಿಸಲು ಸಹಾಯಕವಾಗುವ ಈಯಾಂತ್ರಿಕ ಸುಧಾರಣೆಗಳು ಸ್ವಾಗತಾರ್ಹವಾಗಿವೆ. ಉದಾಹರಣಾರ್ಥವಾಗಿ ಸಶಕ್ತ ಮನುಷ್ಯನೊಬ್ಬನು ತಕಲಿಯಿಂದ ತನಗೆ ಬೇಕಾದಷ್ಟು ನೂಲು ತೆಗೆಯಬಹುದು, ಅಶಕ್ತ ಮನುಷ್ಯ ಧನುಷ್ಯ ತಕಲಿ ಇಲ್ಲವೆ ಚರಖಾದಿಂದ ಅಷ್ಟೇ ವೇಳೆಯಲ್ಲಿ ತೆಗೆಯುವಷ್ಟು ನೂಲನ್ನು ಇವನು ತಕಲಿಯಿಂದ ತೆಗೆಯಬಹುದು. ಆದುದರಿಂದ ಸ್ವಾವಲಂಬನವಷ್ಟೇ ನಮ್ಮ ಗುರಿಯಾಗಿದ್ದರೆ ಸಶಕ್ತ ಮನುಷ್ಯನು ಬೇರೆ ಯಾವದೇ ಯಂತ್ರೋಪಕರಣವನ್ನ ಪೇಕ್ಷಿಸಬಾರದು. ಆದರೆ ಸ್ವಾವಲಂಬಿಯಾಗಬಯಸುವ ಅಶಕ್ತನು ಈ ಸಮಯದಲ್ಲಿ ನಿಃಸಹಾಯನಾಗುವನು. ಇದು ಕೇವಲ ಒಂದು ಸರಳ ಉದಾಹರಣೆ. ಆದರೆ ರಾಷ್ಟ್ರಕ್ಕಾಗಿ ಬೇಕಾಗಿರುವ ಸಂಪತ್ತಿನ ಉತ್ಪಾದನೆಯ ಬಗ್ಗೆ ಅಶಕ್ತ ಮತ್ತು ವೃದ್ಧ ಮನುಷ್ಯರಿಗೆ ಉದ್ಯೋಗ ದೊರಕಿಸುವದರ ಸಂಬಂಧದಲ್ಲಿ ವಿಚಾರಿಸಿದರೆ ಸಂಶೋಧಕ ಬುದ್ಧಿಯವರಿಗೆ ವಿಶಾಲಕ್ಷೇತ್ರವಿದೆ. ಅಶಕ್ತರನ್ನು ದುರ್ಬಲರನ್ನು ಅಥವಾ ವ್ಯಂಗರನ್ನು ಉಪಕರಣಗಳ ಸಹಾಯದಿಂದ ಸಶಕ್ತರ ಮತ್ತು ಸುಪುಷ್ಟ ಜನರ ಮಟ್ಟಕ್ಕೆ ತಂದು ಮುಟ್ಟಿಸಲು ಯಂತ್ರೋಪಕರಣಗಳಲ್ಲಿ ಅವಶ್ಯಕ ಸುಧಾರಣೆಗಳನ್ನು ಮಾಡುವವರಿಗೆ ಎಲ್ಲಬಗೆಯ ಪ್ರೋತ್ಸಾಹನೆಯನ್ನು ಕೊಡಬೇಕು.

ಇದು ಮಹತ್ವದ್ದಿರುವದರಿಂದ ಶಿಕ್ಷಣದ ವರ್ಧಾ ಯೋಜನೆಯ ಉಲ್ಲೇಖವನ್ನು ನಾನು ಮಾಡಬಯಸುವುದಿಲ್ಲ. ದಕ್ಷತೆಯಿಂದ ಮತ್ತು ಜಾಣತನದಿಂದ ಆ ಯೋಜನೆಯನ್ನು ಜಾರಿಯಲ್ಲಿ ತಂದರೆ ದೇಶದ ಆರ್ಥಿಕ ಪುನರುಜ್ಜೀವನದಲ್ಲಿ ಅಷ್ಟೇ ಅಲ್ಲದೆ ಮಾನವನ ಇಡೀ ಶಿಕ್ಷಣದಲ್ಲಿಯೇ ಅದು ಮಹತ್ವದ್ದೆಂದು ನನ್ನ ಭಾವನೆ.

ಸರಕಾರದ ವಿವಿಧ ಶಾಖೆಗಳ ಚಟುವಟಿಕೆಗಳನ್ನು ಏಕಸೂತ್ರಕ್ಕೆ ತರುವ ಕನಿಷ್ಠ ಪಕ್ಷಕ್ಕೆ, ಸಮವರ್ಗಕ್ಕೆ ತರುವದರ ಅವಶ್ಯಕತೆಯನ್ನು ಮತ್ತು ಆಡಳಿತೆಯ ಯಂತ್ರವನ್ನು ಸುಗಮ ಮಾಡುವದರ ಅವಶ್ಯಕತೆಯನ್ನು ವಿವರಿಸುವದನ್ನೂ ನಾನು ಬಿಟ್ಟು ಬಿಡುವೆನು.

ಇವೆರಡೂ ವಿಷಯಗಳನ್ನು ಈಗಾಗಲೆ ಎರಡನೆಯವರು ಸಾಕಷ್ಟು ಒತ್ತಿ ಹೇಳಿರುವರೆಂದು ನನ್ನ ಭಾವನೆ.

ವಾಪಿ ಕಿಶೋರಲಾಲ ಮಶ್ರೂವಾಲಾ
೨೯—೧೧—೪೬

## ಕಪಿವಧೆ

ಒಬ್ಬನು ಈ ಕೆಳಗಿನಂತಿರುವ ಪತ್ರಿಕಾ ಸುದ್ದಿಯನ್ನು ಕತ್ತರಿಸಿ ಕಳಿಸಿದ್ದಾನೆ:

"ಮಂಗಗಳನ್ನು ಕೊಲ್ಲುವದಕ್ಕೆ ಮೊದಮೊದಲು ತುಸು ವಿರೋಧ ಬಂದರೂ ಈಗ ಓಡಿಸಾ ಸರಕಾರದವರ ಕಪಿಪೀಡಾ ಪರಿಹಾರ ಯೋಜನೆಗೆ ತುಂಬ ಯಶಸ್ಸು ದೊರತಿದೆ" ಎಂದು ಒಂದು ಪತ್ರಿಕಾ ಪ್ರಕಟನೆ ಹೇಳುತ್ತದೆ.

"ಓಡಿಸಾದಲ್ಲಿ ಬೇಸಾಯಕ್ಕೆ ಮಂಗಗಳ ಉಪದ್ರವದಂಥ ಪಿಡುಗು ಬೇರಾವುದೂ ಇರಲಿಲ್ಲವೆನ್ನಬಹುದು," ಆ ಪ್ರಕಟನೆ ಮುಂದುವರಿಯುತ್ತದೆ. "ಈ ಯೋಜನೆಯನ್ವಯ ಸರಕಾರವವರು ಮಂಗಗಳನ್ನುಕೊಂದವರಿಗೆ ಪ್ರತಿ ಮಂಗನಿಗೆ ಮೂರು ರೂಪಾಯಿಯ ಬಹುಮಾನ ಕೊಡಲಾಗುವದೆಂದು ಸಾರಿದರು.

"ಈಗ ಗಂಡು ಮಂಗಗಳನ್ನು ಕೊಲ್ಲುವ ಮೂಲಕ ಪ್ರಾಂತದ ಕಪಿಸಂಖ್ಯೆಯನ್ನು ಕಡಿಮೆ ಮಾಡುವ ಪ್ರಯತ್ನಗಳನ್ನು ಬಲಗೊಳಿಸುವ ಕಾಲ ಬಂದಿದೆಯೆಂದು ಸರಕಾರಕ್ಕೆ ನಿಸುತ್ತದೆ. ಆದುದರಿಂದ ಇನ್ನು ಮುಂದೆ ಗಂಡು ಮಂಗಗಳನ್ನು ಚಿಕ್ಕ ಮಂಗಗಳನ್ನೂ ಕೊಂದವರಿಗೆ ಪ್ರತಿ ಮಂಗನಿಗೆ ರೂ. ೪ ರಂತೆ ಕೊಡಲಾಗುವದು."

ಪತ್ರ ಬರೆದವನು ಇದರಿಂದ ತನಗೆ ಸಿಡಿಲು ಬಡಿದಂತಾಗಿದೆಯೆನ್ನುತ್ತಾನೆ. ಕರುಣಾಳುವಾದ ಗಾಂಧೀಜಿ "ಹರಿಜನ"ದಲ್ಲಿ ಈ ಪ್ರಶ್ನೆಯನ್ನು ಕೊಳ್ಳುವದಲ್ಲದೆ ಈ ಬಡ ಮೂಕ ಪ್ರಾಣಿ ವಿರುದ್ಧ ಓಡಿಸಾದಲ್ಲಿ ಪ್ರಾರಂಭವಾದ ದ್ವೇಷವನ್ನು ನಿಲ್ಲಿಸುವಂತೆ ತಮ್ಮ ಪ್ರಭಾವವನ್ನು ಕಾಂಗ್ರೆಸ್ ಮಂತ್ರಿ ಮಂಡಲದ ಮೇಲೆ ಉಪಯೋಗಿಸಬೇಕೆಂದು ಅವನ ಅಪೇಕ್ಷೆ.

ಮೂಕ ಜೀವಿಗಳ ಮೇಲೆ ನನಗೆ ಎಷ್ಟೇ ಪ್ರೇಮಾನುಕಂಪಗಳಿದ್ದರೂ ಸ್ವತಃ ಒಂದು ಕೀಟವನ್ನು ಕೂಡ ಕೊಲ್ಲುವದು ನನ್ನಿಂದಾಗದಿದ್ದರೂ ಓಡಿಸಾ ಸರಕಾರಕ್ಕೆ ತನ್ನ ಉಪಕ್ರಮವನ್ನು ನಿಲ್ಲಿಸಬೇಕೆಂದು ಕೇಳುವದು ಸಾಧ್ಯವಿಲ್ಲವೆಂದು ನನ್ನ ಹೇಳಿಕೆ. ಬೇಸಾಯಕ್ಕೆ ಅಪಾಯ ಮಾಡುವ ಪ್ರಾಣಿಗಳನ್ನು ಕೊಂದಲ್ಲದೆ ಬೇರೆ ಪೈರನ್ನು ರಕ್ಷಿಸುವ ವ್ಯವಹಾರ್ಯ ಉಪಾಯವೇ ಇಲ್ಲವೆಂದು ತೋರುತ್ತದೆ. ಮಂಗಗಳು ಮಾತ್ರವೇ ಉಪದ್ರವಿಗಳಿಂದಲ್ಲ. ಇಲಿಹೆಗ್ಗಣಗಳು, ಮೊಲಗಳು, ಎರಳೆಗಳು ಕಾಡು ಹಂದಿಗಳು ಇವೇ ಜಾತಿಗೆ ಸೇರುತ್ತವೆ. ಮನುಷ್ಯನು ಅವುಗಳೆಲ್ಲದರ ನಾಶಕ್ಕೆ ಸುಸಂಘಟಿತ ಉಪಾಯಗಳನ್ನು ಕೈಕೊಳ್ಳಲೇ ಬೇಕಾಗುತ್ತದೆ. ಮನುಷ್ಯನು ಇತರ ಪ್ರಾಣಿಗಳಂತೆ ನೈಸರ್ಗಿಕ ಜೀವನವನ್ನದರೂ ಬಾಳಬೇಕು. ಇಲ್ಲವೆ ತನ್ನ ಭಾವನೆಯ "ನಾಗರಿಕ ಜೀವನ"ವನ್ನು ಬಾಳುವಗೋಸುಗ ಉಪದ್ರವಿ ಪ್ರಾಣಿಗನ್ನಾದರೂ ವಧಿಸಬೇಕು.

ವಾಪಿ, —ಕಿಶೋರಲಾಲ ಮಶ್ರುವಾಲಾ
೯—೧೨—೪೬

## ಸ್ತುತ್ಯ

ಬಿಹಾರದ ಸಾಹಿಬಗಂಜದ ಸ್ಥಾನಿಕ ಮ್ಯಾಜಿಸ್ಟ್ರೇಟರಾದ ಶ್ರೀ ವಿಶ್ವಾನಂದ ಜಾಯಸವಾಲರು ತಮ್ಮ ಪ್ರಸಂಗಾವಧಾನದಿಂದಲೂ ಧೈರ್ಯದಿಂದಲೂ ಅಲ್ಲಿಯ ಹಿಂದೂ ಮುಸ್ಲಿಮರಲ್ಲಿ ಭೀಕರ ತಿಕ್ಕಾಟವಾಗುವದು ಹೇಗೆ ತಪ್ಪಿತೆಂಬ ಬಗ್ಗೆ ಈ ಕೆಳಗಿನ ವರದಿಯನ್ನು ಕಳಿಸಿದ್ದಾರೆ. ಅವರು ಹೇಳುತ್ತಾರೆ: —

"೫-೧೧-೪೬ ನೆ ಅಂದರೆ ಬಕ್ರೀದ ದಿನ ಸಂಜೆ, ಕರ್ಫ್ಯೂ ಕಟ್ಟಳೆಯಿದ್ದರೂ ಸಾಹಿಬಗಂಜದ ಕಟುಕರ ಓಣಿಯಲ್ಲಿ ಜನರು "ಅಲ್ಲಾಹೋ ಅಕಬರ" ಮೊದಲಾಗಿ ಕೂಗಿಕೊಳ್ಳುತಿದ್ದರು. ಅದರಾಚೆಗೆ, ಹಿಂದೂ ಓಣಿಯಲ್ಲಿ ಜನರು "ಜಯ ಕಾಲಿ ನೌಖಾಲಿ", "ವೀರ ಸ್ವಾಮಿಕೀ ಜಯ" ಇತ್ಯಾದಿಯಾಗಿ ಉತ್ತರ ಕೊಡುತ್ತ ಶಂಖಗಳನ್ನು ಪುಟಿಸುತಿದ್ದರು. ಕಟುಕರ ಓಣಿಗೆ ಧಾವಿಸಿ ನಾನು ನೋಡಿದಾಗ ನೂರಾರು ಮುಸ್ಲಿಮರು ಬಿಚ್ಚುಗತ್ತಿಗಳನ್ನೂ ಗುದ್ದಲಿಗಳನ್ನೂ ಈಟಿಗಳನ್ನೂ ಹಿಡಿದುಕೊಂಡು ಹಿಂದೂ ವಸತಿಯನ್ನು ಮುತ್ತಲು ಉದ್ಯುಕ್ತರಾಗಿದ್ದರು. ಹಿಂದುಗಳೂ ದೊಣ್ಣೆ ಮೊದಲಾದವುಗಳಿಂದ ಸಜ್ಜಾಗಿ ಮುನ್ನುಗ್ಗಲು ಸಿದ್ಧರಾಗಿದ್ದರು. ನಾನು ಎರಡೇ ನಿಮಿಷ ಹಿಂದೆ ಮುಂದೆ ನೋಡಿದ್ದರೆ ಕೂಡ ಅನೇಕ ಹೆಣಗಳು ಬೀಳುತಿದ್ದವು. ಪರಿಸ್ಥಿತಿಯನ್ನು ಹಿಡಿತಕ್ಕೆ ತರಲು ಬೇರಾವ ಉಪಾಯವೂ ಇಲ್ಲೆಂದು ಮನಗಂಡ ನಾನು ಏಕಾಕಿಯಾಗಿ ನಿಶ್ಶಸ್ತ್ರನಾಗಿ ಮುಸಲ್ಮಾನರ ಗುಂಪಿನೊಳಗೆ ನುಗ್ಗಿ ಅವರಲ್ಲನೇಕರ ಕೈಯಿಂದ ಕತ್ತಿ ಈಟಿಗಳನ್ನು ಕಸಿದುಕೊಂಡೆ. ಅವರು ಕೈಕೊಂಡ ಉಪಕ್ರಮವೆಷ್ಟು ಹೀನ ಎಷ್ಟು ಮೂರ್ಖತನದ್ದೆಂಬದನ್ನು ತಿಳಿಸುತ್ತ ಶಾಂತರಾಗಿ ಮನೆಗೆ ಹೋಗಲು ಹೇಳಿದೆ. ದೇವರ ದಯೆಯಿಂದ ಮಹಾತ್ಮರು ತೋರಿಸಿದ ಅಹಿಂಸಾ ಮಾರ್ಗ ಸಫಲವಾಯಿತು. ಎಲ್ಲ ಮುಸ್ಲಿಮರೂ ಶಾಂತರಾಗಿ ತಮ್ಮ ತಮ್ಮ ಮನೆಗಳಿಗೆ ಹೋದರು. ಆ ಮೇಲೆ ನಾನು ಹಿಂದೂ ವಸತಿಗೆ ಹೋಗಿ ಅದೇ ಉಪಾಯವನ್ನು ಪ್ರಯೋಗಿಸಿದೆನು- ಪರಿಣಾಮವೆಷ್ಟು ಮಂಗಲಕರವಾಯಿತೆಂದರೆ, ಅಂದಿನಿಂದ ನಮ್ಮ ಪಟ್ಟಣದಲ್ಲಿ ಯಾವ ದುರ್ಘಟನೆಯೂ ಸಂಭವಿಸಿಲ್ಲ."

ಸಾಬರಮತಿ —ನ. ಪ.
೧೭—೧೨—೪೬



# ದೌರ್ಜನ್ಯಕ್ಕೂ ಧರ್ಮಶಾಸ್ತ್ರ!

ಮನುಷ್ಯನು ತನ್ನ ಅಂತರಿಕ ಕಾಮನೆ, ಮಹತ್ವಾಕಾಂಕ್ಷೆ ಇಲ್ಲವೆ ಬೇರೆ ಬಗೆಯ ಸ್ವಾರ್ಥಗಳ ಸಮರ್ಥನೆಗೆ ಅಥವಾ ಇತರರನ್ನು ಅಂಥ ಕಾರ್ಯಪ್ರವೃತ್ತಿಗಳಿಗೆ ಪ್ರಚೋದಿಸಲು ಧಾರ್ಮಿಕ ಗ್ರಂಥಗಳ ಅನುಜ್ಞೆಗಳನ್ನು ಉದಾಹರಿಸಲು ಪ್ರಯತ್ನಿಸಿದರೆ ಇಲ್ಲವೆ ಅಂಥ ತನ್ನ ಕ್ರಿಯೆಗಳಿಗೆ ಧಾರ್ಮಿಕ ಅಥವಾ ನೈತಿಕ ಧ್ಯೇಯಗಳ ಹೊದಿಕೆ ಹೊದಿಸಿದರೆ ಅದು ಧರ್ಮತತ್ವಗಳ ಭಯಂಕರ ದುರುಪಯೋಗವೇ ಸರಿ. ಅದನ್ನು ನೋಡಿದಾಗ ಧಾರ್ಮಿಕ ಅಥವಾ ತಾತ್ವಿಕ ಶಾಸ್ತ್ರಗಳೇ ಇರಬಾರದಿತ್ತು ಎನಿಸುತ್ತದೆ.

ತನ್ನ ಯಾವುದಾದರೊಂದು ಕೃತ್ಯವೋ ನಡೆವಳಿಯೋ ವಿವೇಕಶೀಲ ಮಾನವ ಪ್ರಾಣಿಯ ತರ್ಕದ ಒರೆಗೆ ನಿಲ್ಲಲಾರದೆಂದು ಕಂಡುಕೊಂಡ ಮನುಷ್ಯನು ಆದರೂ ಆ ಕೃತ್ಯದಲ್ಲಿ ಆಸಕ್ತನಾದರೆ ಅಥವಾ ಇತರರನ್ನು ಅಂಥ ಕೃತ್ಯಗಳಿಗೆ ಪ್ರಚೋದಿಸಲು ಆತುರಪಟ್ಟರೆ ಅದನ್ನು ಧರ್ಮದ ಆಜ್ಞಾಬಲದಿಂದ ಸಮರ್ಥಿಸಿಕೊಳ್ಳಲು ಅವನು ಹವಣಿಸುತ್ತಾನೆ. ಹೀಗೆ ಅವನು ಇದರಿಂದ ಆತ್ಮವಂಚನೆ ಮಾಡಿಕೊಳ್ಳುತ್ತಿರಲಿ ಬಿಡಲಿ, ಖಂಡಿತವಾಗಿಯೂ ನೂರಾರು ಜನ ಸರಳ ಜನರನ್ನು ವಂಚಿಸಿ ತಪ್ಪು ದಾರಿ ಹಿಡಿಸುತ್ತಾನೆ.

ವಿಚಾರಶೀಲನೂ ಅಭ್ಯಾಸಿಯೂ ಎಂದು ತೋರುವ ಪತ್ರಲೇಖಕನೊಬ್ಬನು ಕೇಳಿರುವ ಎರಡು ಪ್ರಶ್ನೆಗಳಿಂದ ನನ್ನ ಮನಸಿನಲ್ಲಿ ಈ ವಿಚಾರ ತರಂಗಗಳು ಉದ್ಭವಿಸಿದವು. ಆ ಪ್ರಶ್ನೆಗಳಿಂತಿವೆ:-

"(೧) ಮಹಾಭಾರತ ಯುದ್ಧವನ್ನು ಧರ್ಮಯುದ್ಧವೆಂದು ಕರೆಯುವದುಂಟು. ಆದರೆ ನಿಜವಾಗಿ ಅದು ಅಂತಃಕಲಹವಾಗಿತ್ತು. ಆಧುನಿಕ ವಾಗ್ಝರಣಿಯಲ್ಲಿ ಯಾದವೀಯುದ್ಧ, ಬಂಧುಹತ್ಯಾಯುದ್ಧ ಎಂದು ಕರೆಯಲ್ಪಡುವ ಯುದ್ಧಕ್ಕಿಂತ ಅದೇನೂ ಉತ್ತಮವಾಗಿದ್ದಿಲ್ಲ. ಅಂಥ ಹೋರಾಟವನ್ನು ಧರ್ಮಯುದ್ಧವೆಂದು ಕರೆಯಬಹುದೆ? ಅಹುದಾದರೆ, ಸದ್ಯದ ಜಾತೀಯ ದಂಗೆಗಳನ್ನೂ ಏಕೆ ಧರ್ಮಯುದ್ಧವೆಂದು ಕರೆಯಕೂಡದು? ಒಂದು ಜಾತಿಯ ಮೇಲೆ ಇನ್ನೊಂದು ಜಾತಿಯ ಅನ್ಯಾಯವಾದ ಬೇಡಿಕೆಗಳನ್ನು ಪ್ರತಿಭಟಿಸುವಗೋಸುಗವೇ ಅದು ಹೂಡಲ್ಪಟ್ಟಿಲ್ಲವೆ? ನಾವು ಅದಕ್ಕೆ ಅನಂತಕಾಲದವರೆಗೂ ತಲೆವಾಗುತ್ತ ಹೋಗೋಣವೆ? ಅಂಥ ಉದ್ದಂಡತನವನ್ನೆದುರಿಸಿ ಹೋರುವದು ನ್ಯಾಯವೂ ಯೋಗ್ಯವೂ ಆದ ಯುದ್ಧವಲ್ಲವೆ?

"(೨) ಶ್ರೀಕೃಷ್ಣ ಪರಮಾತ್ಮನು ಮಹಾಭಾರತ ಯುದ್ಧದಲ್ಲಿ ಆಯುಧಗ್ರಹಣ ಮಾಡಲಾರೆನೆಂದು ಪ್ರತಿಜ್ಞೆ ತೊಟ್ಟಿದ್ದರೂ ಸಂಕಟ ಪ್ರಸಂಗದಲ್ಲಿ ಅದನ್ನು ಮುರಿದು ಭೀಷ್ಮನ ವಿರುದ್ಧ ಸುದರ್ಶನ ಚಕ್ರವನ್ನೆತ್ತಿದನು. ಮಹಾತ್ಮಾ ಗಾಂಧಿಯವರಾದರೂ ಹಾಗೆಯೇ ಮನ ಬದಲಿಸಿ ಕೆಲಕಾಲ ಹಿಂಸೆಗೇಕೆ ಅವಕಾಶ ಕೊಡಬಾರದು?

ಇದಕ್ಕುತ್ತರವಿಷ್ಟೆ: ಒಬ್ಬ ಮನುಷ್ಯನು ತನ್ನನ್ನೆದುರಿಸುವ ಪ್ರಶ್ನೆಯನ್ನು ಸ್ವತಂತ್ರ ಪ್ರತ್ಯಕ್ಷ ತರ್ಕದ ಪದ್ಧತಿಯಲ್ಲಿ ಚರ್ಚಿಸಿ ಅದರ ತಾತ್ವಿಕ ನಿಜ ರೂಪವನ್ನು ಕಂಡುಹಿಡಿಯಲು ಪ್ರಯತ್ನಿಸಿ ಮುಗಿಸಿದ ಹೊರತು ಧಾರ್ಮಿಕ ಅಥವಾ ಐತಿಹಾಸಿಕ ಆಧಾರಗಳನ್ನು ಹುಡುಕಾಡಲು ಅವಕಾಶವಿಲ್ಲ! ಮಾತ್ರವಲ್ಲ ಹಾಗೆ ಮಾಡುವದು ಸರಿಯೂ ಅಲ್ಲ.

ಒಂದು ಕ್ಷಣಕಾಲ ಅಖಂಡ ಹಿಂದುಸ್ತಾನ ಅಥವಾ ಪಾಕಿಸ್ತಾನದ ಪ್ರಶ್ನೆಗಳನ್ನು ಬದಿಗಿಟ್ಟು, ಮಾನವ್ಯದ ಮತ್ತು ಅವರ ಹಿತದ ದೃಷ್ಟಿಯಿಂದ ಈ ಗಲಭೆಗಳನ್ನು ವಿಚಾರಿಸೋಣ. ಕಲಕತ್ತೆ, ಪೂರ್ವ ಬಂಗಾಲ, ಬಿಹಾರ ಮತ್ತು ಎಷ್ಟೋ ಸ್ಥಳಗಳಲ್ಲಿ ನಡೆದ ಸಾಮೂಹಿಕ ಹತ್ಯೆ, ದಹನ ಮತ್ತು ಅದಕ್ಕೂ ಭಯಾನಕವಾದ ಕೃತ್ಯಗಳೂ ಇನ್ನೂ ಅನೇಕ ನಗರ ಪಟ್ಟಣಗಳಲ್ಲಿ ನಡೆಯುತ್ತಲೆ ಇರುವ ಇರಿತ ಮೊದಲಾದವುಗಳೂ ಯೋಗ್ಯ ಮಾನವ ನಡವಳಿಕೆಗಳೇ ಎಂದು ಪ್ರಶ್ನಿಸಿಕೊಳ್ಳೋಣ. ನಮ್ಮ ಉನ್ನತ ಮಾನವೀ ಭಾವನೆಗಳು ಈ ಪಾಶವತೆಯ ಪ್ರದರ್ಶನಕ್ಕೆ ಅನುಜ್ಞೆ ಕೊಡುತ್ತವೆಯೆ? ನಾವು ಹಿಂದುಗಳಾಗಿದ್ದು ನಿಸ್ಸಹಾಯವಾದ ಒಂದು ಮುಸ್ಲಿಂ ಜನಸಮೂಹವನ್ನು ಕಂಡಾಗ ಅಥವಾ ನಾವು ಮುಸ್ಲಿಮರಾಗಿದ್ದು ನಿಸ್ಸಹಾಯ ಹಿಂದೂ ಜನಸಮೂಹವನ್ನು ಕಂಡಾಗ, ಅವರ ನೆತ್ತರಿಗಾಗಿ ನೀರಡಿಸಿ ಅವರ ಮೇಲೆ ಕೊಳ್ಳಿ ಕತ್ತಿಗಳ ದಾಳಿಯಿಟ್ಟು, ಅವರ ಹೆಂಗಸರನ್ನು ಕೆಡಿಸಿ, ಮುದಿ ಬಲಹೀನ ಸ್ತ್ರೀ ಪುರುಷರನ್ನೂ ಎಳೆ ಹಸುಳೆಗಳನ್ನೂ ಸಿಕ್ಕಾಬಟ್ಟೆ ಕೊಂದು ಹಾಕಿ, ಅಮೇಲೆ ನಮ್ಮೀ ಪೈಶಾಚಿಕ ದೌರ್ಜನ್ಯಕ್ಕೆ ಶಾಸ್ತ್ರಾಧಾರಗಳನ್ನೆತ್ತಿ ತೋರಿಸಬೇಕಾದರೆ ನಮಗೆಂಥ ಘನ ಹುಚ್ಚು ಹಿಡಿದಿರಬೇಕು! ನೌಖಾಲಿಯ ಅರ್ಧೋಪವಾಸಿ ಒಕ್ಕಲಿಗರು-ನಾಮಶೂದ್ರರಿಗಾಗಲಿ, ಬಿಹಾರದ ಮುಸ್ಲಿಂ ಒಕ್ಕಲಿಗರಿಗಾಗಲಿ, ಕುಲಾಬಾದ ಅಂಬಿಗರಿಗಾಗಲಿ, ಅವರ ಹೆಣ್ಣುಮಕ್ಕಳಿಗಾಗಲಿ ಅಖಂಡ ಹಿಂದುಸ್ತಾನ ಪಾಕಿಸ್ತಾನಗಳನ್ನು ಕುರಿತು ಏನು ಗೊತ್ತಿದೆ; ಮತ್ತು ಅವರ ಪ್ರಾಣ ಮಾನ ವಿತ್ತಗಳನ್ನು ಅಪಹರಿಸಲು ಇಬ್ಬರಲ್ಲಾ ವನಾದರೊಬ್ಬನು ಏಕೆ ಪ್ರಯತ್ನಿಸಬೇಕು? ಈ ರಾಜಕೀಯ ಮಹತ್ವಾಕಾಂಕ್ಷೆಗಳು ಅವರ ರಕ್ತದ ಕಾಣಿಕೆಯನ್ನೇಕೆ ಬೇಡಬೇಕು, ಅವರನ್ನೇಕೆ ಹಾಳು ಮಾಡಬೇಕು? ತನ್ನ ವ್ಯಾಪಾರದಲ್ಲಿ ನಿರತನಾಗಿ ಅಡ್ಡಾಡುತಿರುವ ಹಿಂದೂ ಅಥವಾ ಮುಸ್ಲಿಂ ಹೊತ್ತುಮಾರುವವನು ಒಮ್ಮಿಂದೊಮ್ಮೆ ಬೆನ್ನಲ್ಲಿ ಇರಿಯಲ್ಪಡಬೇಕಾದರೆ ಮತ್ತು ಹಾಗೆ ಇರಿಸಿಕೊಂಡವನಲ್ಲಿ ಸಹಾನುಭೂತಿ ವ್ಯಕ್ತಗೊಳಿಸುವ ಬದಲು ಇರಿದವನಲ್ಲಿ ನಿಮ್ಮ ಸಹಾನುಭೂತಿ ಹೊರಳಬೇಕಾದರೆ ಆ ದುರ್ದೈವಿ ಮಾಡಿದ ಅಪರಾಧವೇನು?

ವಸ್ತುತಸ್ತು, ಯುದ್ಧದ ಮತ್ತು ಅದಕ್ಕೆ ಸಂಬಂಧಿಸಿದ ದುರ್ವ್ಯಸನಗಳ ಆತುರ ಇನ್ನೂ ಮಾನವಹೃದಯದಿಂದ ಪೂರ್ತಿಯಾಗಿ ಅಳಿದುಹೋಗಿಲ್ಲ. ಆಗಿಂದಾಗ್ಗೆ ಅದು ಒಂದಲ್ಲ ಒಂದು ರೂಪದಿಂದ ಉರಿದೇಳಲು ಕಾರಣ ಅದೇ. ಕೆಲವೇ ಪ್ರಭಾವಶಾಲಿ ಜನರು ಮಹತ್ವಾಕಾಂಕ್ಷೆಯಿಂದ ಅದಕ್ಕೆ ಗಾಳಿಹಾಕಿ ಉರಿಯೆಬ್ಬಿಸುತ್ತಾರೆ ಮತ್ತು ಆ ಮೇಲೆ ಲಕ್ಷೋಪಲಕ್ಷ ನಿರಪರಾಧಿ ಮಾನವ ಪ್ರಾಣಿಗಳನ್ನು ಅದು ಸೆಳೆಯುತ್ತದೆ; ಕೋಟಿ ಕೋಟಿ ಬೆಲೆ ಬಾಳುವ ಸೊತ್ತುಗಳನ್ನು ಹಾಳುಗೆಡಹಿ ಇಡಿ ಮಾನವ ಸಮಾಜಕ್ಕೆ ಅವರ್ಣನೀಯ ದುಃಖ ಕ್ಲೇಶ ಸರ್ವನಾಶಗಳನ್ನು ತರುತ್ತದೆ. ಹುಂಬ ಜನರನ್ನು ಈ ಬೆಳೆಯಲ್ಲಿ ಸಿಕ್ಕಿ ಬೀಳುವಂತೆ ಮಾಡಲು ವಿವಿಧ ಕುಟಿಲ ಅವಿಚಾರಗಳನ್ನು ತೋಗಿಸಲಾಗುವದು. "ಧರ್ಮಕ್ಕೆ ಗಂಡಾಂತರ ಬಂದಿದೆ" ಎಂಬ ಕೂಗು ಅಂಥ ಕುಟಿಲೋಪಾಯಗಳಲ್ಲೊಂದು. ಅದರ ಮಾಯೆಯಿಂದ ಕ್ಷಣಪೂರ್ವದಲ್ಲಿ ಸರಳ ಜನರಾಗಿದ್ದವರನ್ನು ಹಿಂಸ್ರ ಧರ್ಮಾಂಧರನ್ನಾಗಿ ಪರಿವರ್ತಿಸಿಬಿಡುವರು; ಅವರನ್ನು ಹಿಂಸ್ರ ಪಶುಗಳಿಗಿಂತ ಉನ್ಮತ್ತ ಆನೆಗಳಿಗಿಂತ ಕಳಪೆಯಾಗಿ ಮಾಡಿಬಿಡುವರು.

"ನೀವು ಮೃಗಗಳು, ಅದ್ದರಿಂದ ಮೃಗಗಳಂತೆ ವರ್ತಿಸಿರಿ" ಎಂದು ಯಾರಾದರೂ ಜನರಿಗೆ ಹೇಳಿದರೆ ಜನರು ಅವರನ್ನು ಹಿಂಬಾಲಿಸಲಿಕ್ಕಿಲ್ಲವೆಂಬುದು ಸ್ಪಷ್ಟ. ಅದ್ದರಿಂದ ನಿಮ್ಮ ಕಾರ್ಯಸಾಧನೆಗಾಗಿ ನೀವು ಹೇಳುವಿರಿ: "ಈ ಕೊಲೆ ದೇವರಿಂದ ಧರ್ಮಗ್ರಂಥಗಳಿಂದ ಅಜ್ಞಾಪಿಸಲ್ಪಟ್ಟಿದೆ. ಅದು ಅತ್ಯಂತ ಪುಣ್ಯವಾಯಿಯಾದ ಯಜ್ಞ; ಅದು ಪರಮಾತ್ಮನ ಸೇವೆ ಧರ್ಮಸಮ್ಮತವಾದ ಕೃತ್ಯ; ಭಗವದನುಗ್ರಹವನ್ನು ಸಂಪಾದಿಸುವ ರಾಜಮಾರ್ಗವಿದು; ಅದು ಕೊಂದವರನ್ನೂ ಕೊಲ್ಲಿಸಿಕೊಂಡವರನ್ನೂ ಉದ್ಧರಿಸುವದು; ಏಕೆಂದರೆ ನೀವು ಸತ್ತರೆ ಸ್ವರ್ಗವನ್ನು ಪಡೆಯುವಿರಿ; ನೀವು ಕೊಂದರೆ ಅಥವಾ ವಿರೋಧಿಯನ್ನು ಧರ್ಮಾಂತರ ಮಾಡಿದರೆ ಆಗ ಅವನನ್ನು ಮುಂದೆ ದುರ್ಮಾರ್ಗಕ್ಕೆ ಬೀಳದಂತೆ ಉಳಿಸುವಿರಿ. ಈ ಧರ್ಮಯುದ್ಧದಲ್ಲಿ ನೀವು ಭಾಗವಹಿಸದಿದ್ದರೆ, ನಿಮ್ಮ ಧರ್ಮವೂ ಸಂಸ್ಕೃತಿಯೂ ಮಣ್ಣುಪಾಲಾಗುವವು." ಇಂಥ ಧರ್ಮಾಂಧತೆಯ ಪ್ರಬಲ ಉದ್ದೀಪನದಿಂದ ಮನುಷ್ಯರು ಮಾದಕದ್ರವ್ಯಗಳ ಸೇವನೆ ಮಾಡಿದ್ದಕ್ಕಿಂತಲೂ ಹೆಚ್ಚು ಉನ್ಮತ್ತರಾಗುವರು.

ಇನ್ನು ಪತ್ರಲೇಖಕನ ಪ್ರಶ್ನೆಯ ಕಡೆ ಹೊರಳೋಣ. ಮಹಾಭಾರತ ಯುದ್ಧಕ್ಕೂ ಇಂದು ದೇಶದಲ್ಲಿ ನಡೆಯುತ್ತಿರುವ ದಂಗೆಗಳಿಗೂ ಯಾವ ಹೋಲಿಕೆಯೂ ಇಲ್ಲ. ಅದು ಎರಡು ರಾಜಕುಟುಂಬಗಳಲ್ಲಿ ರಾಜ್ಯಾಧಿಕಾರದ ವಿಷಯಕ್ಕೆದ್ದ ಕೌಟುಂಬಕ ಕಲಹ; ಅಂದಿನ ಯುದ್ಧ ನೀತಿಗನುಸಾರವಾಗಿಯೆ ಹೋರಲ್ಪಟ್ಟಿತು. ಎರಡೂ ಪಕ್ಷಗಳು ಕ್ರಮಬದ್ಧವಾಗಿ ಯುದ್ಧವನ್ನು ಸಾರಿ, ತಮ್ಮ ಯೋಧರನ್ನು ಬಹಿರಂಗವಾಗಿ ಯುದ್ಧಭೂಮಿಯಲ್ಲಿ ಕೂಡಿಸಿ ಕೊನೆಯ ತನಕ ಹೋರಾಡಿದವು. ಎರಡೂಪಕ್ಷಗಳು ಪ್ರಚಲಿತ ಯುದ್ಧನಿಯಮಗಳನ್ನುಸಾಮಾನ್ಯವಾಗಿ ಪಾಲಿಸಿದವು. ಭಾಗವಹಿಸಿದ ಯೋಧರನ್ನು ಹೊರತು ಬೇರೆಯವರನ್ನು ಮುಟ್ಟಲಿಲ್ಲ ಕೂಡ. ಹೋರಾಡಿದ ವೀರರು ಕೂಡ ಪ್ರಚಲಿತ ಆಕ್ರಮಣ ಆತ್ಮರಕ್ಷಣೆಗಳ ನಿಯಮಗಳನ್ನು ಅನುಸರಿಸಿದರು. ಯಾರಾದರೊಬ್ಬನು ನಿಯಮವನ್ನು ಮೀರಿದರೂ ಒಡನೆ ಅವನ ಪಕ್ಷದವರು ಕೂಡ ಅವನಿಗೆ ಛೀ ಮಾರಿ ಹಾಕುತಿದ್ದರು. ಹೀಗೆ ಯುದ್ಧಾಸಕ್ತರು ಕೂಡ ಯುದ್ಧ ಮಾಡುತಿದ್ದಾಗ ಕೆಲ ನಿರ್ದಿಷ್ಟ ವಿಧಿವಿಧಾನಗಳನ್ನೊಪ್ಪಿ ಅದರಂತೆ ವರ್ತಿಸಿದರು. ಅದುದರಿಂದ ಆ ದಿನಗಳಲ್ಲಿ ಅಂಥ ಯುದ್ಧಗಳನ್ನು ಧರ್ಮಯುದ್ಧ ಎಂದರೆ ಧರ್ಮಕ್ಕನುಸಾರವಾದ ಎಂದರೆ ನಿಯಮಬದ್ಧವಾದ ಯುದ್ಧಗಳೆಂದು ಬರೆಯುವದು ವಾಡಿಕೆಯಾಯಿತು.

ಆದರೆ ಸದ್ಯದ ಕೊಲೆ, ಸುಲಿಗೆ, ದಹನ, ಸ್ತ್ರೀಮಾನಹರಣ, ಧರ್ಮಾಂತರಗಳಲ್ಲಿ ಇಂಥ ಯಾವ ಗುಣವೂ ಇಲ್ಲ. ಒಂದು ಜಾತಿಗೆ ಸೇರಿದ ಒಂದು ದೊಡ್ಡ ಜನಜಂಗುಳಿ ಇನ್ನೊಂದ ಜಾತಿಯ ತನಗಿಂತ ಎಷ್ಟೋ ಚಿಕ್ಕ ಗುಂಪಿನ ಮೇಲೆ ಅಥವಾ ಒಮ್ಮೊಮ್ಮೆ ಏಕಾಕಿ ದಾರಿಗನ ಮೇಲೆ ಒಮ್ಮಿಂದೊಮ್ಮೆ ಎರಗುತ್ತದೆ. ಮತ್ತು ಸರ್ವಥಾ ನಿರ್ದೋಷರಾದ ಜನರನ್ನು ವಧಿಸುತ್ತದೆ. ದಾಳಿಗಾರರಲ್ಲಾವನೂ ವೀರ ಯೋಧನಲ್ಲ, ಅಹುತಿಯಾದವನಲ್ಲೊಬ್ಬನೂ ತಪ್ಪುಗಾರನಲ್ಲ. ಹೋರಾಟವನ್ನು ಬಹಿರಂಗವಾಗಿ ನಿಯಂತ್ರಿಸುವ ಸೇನಾನಿಯಿಲ್ಲ. ಈ ಹೀನ ಕೃತ್ಯಗಳ ಬೆನ್ನಲ್ಲಿರುವ ಸೂತ್ರಚಾಲಕರು ತಾವು ಕತ್ತಲಲ್ಲೇ ಉಳಿಯಬಯಸುತ್ತಾರೆ. ಅವರಿಗೆ ತಮ್ಮ ಜೀವದ ಮೇಲೆ ಬಹಳ ಆಶೆಯಿರುತ್ತದೆ. ಅವರು ತಮ್ಮ ನೀಚ ಉದ್ದೇಶಗಳ ಸಾಧನೆಗಾಗಿ ಬಡ ಸರಳ ಹಿತ್ತಾಳೆಕಿವಿಯ ಜನರನ್ನು ಉದ್ರೇಕಿಸುವರು. ಇಲ್ಲವೆ ಹಣವನ್ನೊ ಮತ್ತಾವ ಮರಾಶೆಯನ್ನೋ ತೋರಿಸಿ ಗುಂಡರನ್ನು ಇಟ್ಟುಕೊಂಡು ಕೆಲಸ ಮಾಡಿಸುವರು. ಅವರು ಹೃದಯಹೀನ, ಅಮಾನುಷ, ಸಮಾಜ ವೈರಿ ಜನರು. ಅವರಲ್ಲಿ ಕೆಲವರು ಸಮಾಜದಲ್ಲಿ ಗಣ್ಯವ್ಯಕ್ತಿಗಳಾಗಿರಬಹುದು. ಆದರೆ ಅವರು ಅದರ ಹಿತಚಿಂತಕರಲ್ಲ, ಮನುಷ್ಯರೂಪಿಗಳಾದ ಮಹತ್ವಾಕಾಂಕ್ಷಿ ಪಿಶಾಚಿಗಳು. ಯಾವುದೇ ಧರ್ಮದಲ್ಲಿ ಅನರಿಗಿರುವ ಆದರ ಅಷ್ಟಕ್ಕಷ್ಟೇ.

ಇಂದಿನ ದಂಗೆಗಳನ್ನು ಯಾವುದಾದರೂ ಪ್ರಾಚೀನ ಘಟನೆಗೆ ಹೋಲಿಸಬೇಕಾದರೆ,ಪಾಂಡವರ ನಿದ್ರಿತ ಪುತ್ರರನ್ನೂ ಇತರ ಯೋಧರನ್ನೂ ಪಾಂಡವ ಶಿಬಿರದಲ್ಲಿ ಕೌರವ ಪಕ್ಷದ ಬದುಕಿ ಉಳಿದ ಇಬ್ಬರೇ ಆದ ಅಶ್ವತ್ಥಾಮನೂ ಕೃಪಾಚಾರ್ಯನೂ ಸೇರಿ ನಟ್ಟಿರುಳಲ್ಲಿ ಅಮಾನುಷವಾಗಿ ಕೊಲೆಗಡುಮದಕ್ಕೆ ಹೋಲಿಸಬಹುದು. ದ್ವಾರಕೆಯಲ್ಲಿ ಯಾದವರು ನಡೆಸಿದ ಪರಸ್ಪರ ಹತ್ಯೆಗೂ ಬೇಕಾದರೆ ಹೋಲಿಸಬಹುದು.

ಪತ್ರಲೇಖಕನುಸೂಚಿಸುವ ಇನ್ನೊಂದು ಉದಾಹರಣೆಯೆಂದರೆ ಶ್ರೀಕೃಷ್ಣನು ಇಕ್ಕಟ್ಟಿನ ಪ್ರಸಂಗದಲ್ಲಿ, ತೊಟ್ಟ ಪಣವನ್ನು ಮುರಿದು, ಸುದರ್ಶನ ಚಕ್ರವನ್ನು ಹಿಡಿದುದು. ಶ್ರೀಕೃಷ್ಣನೇ ಹಾಗೆ ಮಾಡಿದಾಗ ಗಾಂಧೀಜಿಯೇಕೆ ಮಾಡಬಾರದೆಂದು ಸೂಚನೆ. ವಿವಶವಾಗಿ ಮಾಡುವ ಈ ಪ್ರಸಂಗವನ್ನೆದುರಿಸಲು ಅವರೇಕೆ ತಮ್ಮ ಅಹಿಂಸೆಯನ್ನು ಸ್ವಲ್ಪ ಸಡಿಲಿಸಬಾರದು? ಮತ್ತು ಗಾಂಧಿಜಿಗೆ ಸ್ವತಃ ಹಿಂಸೆಯನ್ನುಪಯೋಗಿಸುವ ಸಾಮರ್ಥ್ಯವಿಲ್ಲದಿದ್ದರೆ ಬೇರಾರೊಬ್ಬರನ್ನು ಹಾಗೆ ಮಾಡಲು ಏಕೆ ಕೇಳಬಾರದು!

ಈ ಪ್ರಶ್ನೆಯನ್ನು ಒಂದು ಪ್ರತಿಪ್ರಶ್ನೆಯಿಂದ ಉತ್ತರಿಸಬಹುದು. ಗಾಂಧೀಜಿಯವರು ತಮ್ಮ ಬಾಲ್ಯದಲ್ಲಿ ತಮ್ಮ ತಂದೆಗೆ ತಿಳಿಯದಂತೆ ಕದಿಯುವ ಮತ್ತು ಹೊಗೆಬತ್ತಿ ಸೇದುವ ಚಟಕ್ಕೆ ಬಿದ್ದಿದ್ದರೆಂದು ಅವರ ಆತ್ಮಕಥನದಲ್ಲಿಯೇ ಬರೆಯಲಾಗಿದೆ. ಪ್ರಸ್ತುತ ಪತ್ರಲೇಖಕನ ಮಗನು ಇವನನ್ನು ಹೀಗೆ ಕೇಳಿ ಪೇಚಿಗೆ ಕೆಡಹಬಹುದು:

"ಅಂದಮೇಲೆ ನಾನು ಕದ್ದರೆ ಅಥವಾ ಹೊಗೆಬತ್ತಿ ಸೇದಿದರೆ ನೀವೇಕೆ ಅಡ್ಡಿ ಮಾಡಬೇಕೆನ್ನೆ? ಮತ್ತೆ ನಾನೇನೂ ಮಹಾತ್ಮಾ ಪದವಿಗೇರುವದಿಲ್ಲ. ಅದರಿಂದೇನೂ ಕೆಡಕಾಗಲಾರದು." ಈ ವಾದವನ್ನು ತಂದೆ ಸಹಿಸುವನೆ? ಈ ಪ್ರತಿಜ್ಞಾಭಂಗದ ಕಥೆ ನಿಜವಾಗಿದ್ದರೆ, ಅದರರ್ಥವಿಷ್ಟೆ: ಶ್ರೀ ಕೃಷ್ಣನು ಕೂಡ ಎಷ್ಟೇ ಮಹಿಮಾವಂತನಾಗಿದ್ದರೂ ಮಾನವನಾಗಿಯೆ ಇದ್ದನು, ಅದರಿಂದ ತಪ್ಪು ಮಾಡಿದನು. ಅದು ಕಾರಣವೇ ಆ ಮಹಾಪುರಾಣದಲ್ಲಿ ಮುಂದೆ ಭೀಷ್ಮನು ಅವನನ್ನು ಈ ಪ್ರತಿಜ್ಞಾಭಂಗ ಪ್ರಯತ್ನಕ್ಕಾಗಿ ಪಾಟಿಕೆಗೆ ಗುರಿ ಮಾಡಿದನೆಂದೂ ಶಿಷ್ಯನಾದ ಅರ್ಜುನನು ಬೇಗನೆ ಅವನನ್ನು ತಡೆದನೆಂದೂ ಹೇಳಲ್ಪಟ್ಟಿದೆ.

ನಮ್ಮ ಹಳೆಯ ವಿಶ್ವವಿದ್ಯಾನಿಲಯಗಳಲ್ಲಿ ಪದವೀಧರರಿಗೆ ಕೊಡಲ್ಪಡುತಿದ್ದ ಉಪದೇಶವನ್ನು ನಾವು ಮರೆಯತಕ್ಕದ್ದಲ್ಲ: ಗುರುಗಳ ಸದ್ಗುಣಗಳನ್ನಷ್ಟೇ ಶಿಷ್ಯರು ಅನುಕರಿಸಬೇಕಲ್ಲದೆ ಅವರ ತಪ್ಪು ತಡಿಗಳನ್ನಲ್ಲ, ಎಂದು ಹೇಳಲಾಗಿದೆ.

ಈ ಜಾತೀಯ ವಿಷವನ್ನು ಎಷ್ಟು ಬೇಗ ನಿವಾರಿಸುವೆವೋ ಅಷ್ಟು ನಮ್ಮ ದೇಶಕ್ಕೆ ಹಿತ. ನಿಜವಾಗಿ ಈ ಕೇಡು ಪ್ಲೇಗ್, ವಿಷಮಜ್ವರ, ವಾಂತಿಭೇದಿ, ಅಥವಾ ಮೈಲಿ ಬೇನೆಗಿಂತಲೂ ಭಯಂಕರವಾದ ಪಿಡುಗು. ಇಂಥ ಬೇನೆಯೊಂದು ಬಂಗಾಲದಲ್ಲಿ ಇದೆಯೆಂದಿಟ್ಟುಕೊಳ್ಳೋಣ. ಅದರ ನಿವಾರಣೆಗಾಗಿ ಬಿಹಾರ ಮತ್ತು ಇತರ ಪ್ರಾಂತಗಳಲ್ಲಿ ಆ ರೋಗವನ್ನು ತಂದು ಹಬ್ಬಿಸುವ ವಿಚಾರವನ್ನು ನಾವೆಂದೂ ಮಾಡಲಿಕ್ಕಿಲ್ಲ. ಬದಲಿಗೆ ನಾವು ಬುದ್ಧಿವಂತರೂ ಜಾಗ್ರತರೂ ಆಗಿದ್ದರೆ ಅದು ಬೇರೆಡೆಗೆ ಹಬ್ಬದಂತೆ ಪ್ರತಿರೋಧಕ ಉಪಾಯಗಳನ್ನು ಕೈಕೊಳ್ಳುವೆವು. ಉದಾಹರಣೆಗಾಗಿ, ಮೈಲೀ ಹಾಕುವದು, ಕುದಿಸಿದ ನೀರು ಕುಡಿಯುವದು, ಕ್ರಿಮಿನಾಶಕಗಳನ್ನುಪಯೋಗಿಸುವದು, ಗ್ರಸ್ತರಾದವನ್ನು ಬೇರ್ಪಡಿಸುವದು, ಕ್ವಾರಂಟಾಯಿನುಗಳನ್ನು ಕಟ್ಟಿಸುವದೇ ಮೊದಲಾದ ಕ್ರಮಗಳನ್ನು ಕೈಕೊಂಡು ಅರೋಗ್ಯವಂತರನ್ನು ಸಂರಕ್ಷಿಸಬಹುದು. ಬಂಗಾಲದಲ್ಲಿರುವ ಜಾತೀಯ ಪಿಡುಗನ್ನು ಎದುರಿಸಲು ಅದನ್ನು ಬೇರೆಡೆಗಳಲ್ಲಿ ತಂದು ಪಸರಿಸುವದು ಎಂದಾದರೂ ಶುಭಕರವಾದೀತೆ? ಅಂಥ ಕರ್ಮದಿಂದ ದೇಶದ ಆರೋಗ್ಯ ಸುಧಾರಿಸುವ ಆಶೆಯುಂಟೆ? ಸರಳ ವಿಚಾರವನ್ನು ಜನರು ಮರೆತಾಗಲೆ ವಿಕೃತ ಕಲ್ಪನೆಗಳಿಗೆ ಕಿವಿಗೊಟ್ಟು ಅವುಗಳೇ ಸರಿದಾರಿಯ ಧೈರ್ಯದ ಕ್ರಮಗಳೆಂದು ನಂಬುವದು ಸಾಧ್ಯವಿದೆ.

—ಕಿಶೋರಲಾಲ ಮಶ್ರುವಾಲಾ
(ಗುಜರಾತಿಯಿಂದ)

## ಹಿಂದುಸ್ತಾನದ ಗೆಲವು

ಯುಕ್ತರಾಷ್ಟ್ರ ಸಂಘದ ಮಹಾಸಭೆಯಲ್ಲಿ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರೂ ಅವರ ಸಹಯೋಗಿಗಳೂ ದಕ್ಷಿಣ ಆಫ್ರಿಕೆಯ ವಿರುದ್ಧ ದೊರಕಿಸಿದ ಅಪೂರ್ವ ಯಶಸ್ಸಿಗಾಗಿ ಹಿಂದುಸ್ತಾನ ಸಕಾರಣವಾಗಿ ಆನಂದ ಪಡಬಹುದು. ಮತ್ತು ನ್ಯಾಯವಾಗಿ ಹೆಮ್ಮೆ ತಾಳಬಹುದು. ಆಕೆಯ ಕೆಲಸ ಸರ್ವಥಾ ಸುಲಭವಾದುದಿರಲಿಲ್ಲ. ಅತ್ಯಂತ ಸಮರ್ಥ ಮತ್ತು ಜನಾದರಣೀಯ ಸಮಕಾಲೀನ ಮುತ್ಸದ್ದಿಗಳಲ್ಲೊಬ್ಬರೆಂದು ಹೆಸರಾದ ದಕ್ಷಿಣ ಆಫ್ರಿಕೆಯ ಅನುಭವಶಾಲಿ ಮುಖ್ಯಮಂತ್ರಿಗಳಾದ ಫೀಲ್ಡ ಮಾರ್ಶಲ್ ಸ್ಮಟ್ಸರ ವಿರುದ್ಧ ಆಕೆ ತನ್ನ ವಿವಾದವನ್ನು ಸಮರ್ಥಿಸಿಕೊಳ್ಳಬೇಕಾಗಿತ್ತು. ಅವರು ಪಟ್ಟು ಬಿಟ್ಟಿಸಲಿಲ್ಲಯೂ ಕಡಿದಾಗಿ ಸೆಣಸಿದರು. ಸ್ವಯಂ ಬ್ರಿಟಿಶ ಸರಕಾರದ, ಅಂತೆಯೆ ಬ್ರಿಟಿಶ ಸಾಮ್ರಾಜ್ಯದ ಪ್ರಮುಖ ಸದಸ್ಯರ ಬೆಂಬಲವೂ ಸ್ಮಟ್ಸರಿಗಿತ್ತು. ಶ್ರೀಮತಿ ಪಂಡಿತರು ಈ ನ್ಯಾಯವಾದ ಕಾರಣದಲ್ಲಿ ಮಾಡಿದ ಸ್ಫೂರ್ತಿಯುಕ್ತವಾದರೂ ಗೌರವಪೂರ್ಣ ಪ್ರತಿಪಾದನೆಯಿಂದ ಅನೇಕ ಸದಸ್ಯರಾಷ್ಟ್ರಗಳ ಸಹಾನುಭೂತಿ ಹಿಂದುಸ್ತಾನಕ್ಕೆ ದೊರೆ

—೧೧ನೇ ಪುಟಕ್ಕೆ

# ಶಿಕ್ಷಣ ಮಾಧ್ಯಮ

ಸರದಾರ ವಲ್ಲಭಭಾಯಿ ಪಟೇಲರು ನಾಗಪುರ ವಿಶ್ವವಿದ್ಯಾಲಯದ ಪದವೀದಾನ ಸಮಾರಂಭದ ಕಾಲಕ್ಕೆ ನವಂಬರ ೩೦, ೧೯೪೬, ಮಾಡಿದ ಭಾಷಣದಿಂದ ಶಿಕ್ಷಣ ಮಾಧ್ಯಮ ಮತ್ತು ನಮ್ಮ ಶಾಲೆ ಕಾಲೇಜುಗಳಲ್ಲಿನ ಅಭ್ಯಾಸ ಪತ್ರಿಕೆಯಲ್ಲಿ ಇಂಗ್ಲಿಷಿಗಿರುವ ಸ್ಥಾನ ಈ ವಿಷಯದ ಬಗ್ಗೆ ಇರುವ ಅಂಶವನ್ನು ಕೆಳಗೆ ಉದ್ಧರಿಸಲಾಗಿದೆ.]

## ಶಿಕ್ಷಣ ಮಾಧ್ಯಮ

ಮಾತೃ ಭಾಷೆಯನ್ನೆ ಶಿಕ್ಷಣ ಮಾಧ್ಯಮವನ್ನಾಗಿ ಮಾಡಬೇಕೆಂದು ವಿಶ್ವವಿದ್ಯಾಲಯ ನಿರ್ಧರಿಸಿದ್ದು ಅತ್ಯಂತ ಮಹತ್ವದ್ದಾಗಿದೆ. ಪರದೇಶಿ ಭಾಷೆಯನ್ನು ಶಿಕ್ಷಣ ಮಾಧ್ಯಮವೆಂದುಪಯೋಗಿಸುವದರಿಂದ ವಿದ್ಯಾರ್ಥಿಗಳ ಮಾನಸಿಕ ಅಭಿವೃದ್ಧಿಗೆ ತಡೆಯುಂಟಾಗಿದೆಂಬುದನ್ನು ಕಳೆದ ಕಾಲು ಶತಮಾನದಿಂದ ನಾವು ಕಾಣುತಿರುತ್ತೇವೆ. ಶಬ್ದಸಂಪತ್ತಿಯನ್ನು ಬೆಳೆಸಿಕೊಳ್ಳಬೇಕಾದರೆ ಅವರು ಬಹಳ ವೇಳೆಯನ್ನು ವ್ಯಯಮಾಡಬೇಕಾಗುವುದು, ಅಷ್ಟಾದರೂ ತಾವು ಉಪಯೋಗಿಸುತಿರುವ ಶಬ್ದಗಳ ಅರ್ಥ ಸರಿಯಾಗಿದೆಂದು ಅವರಿಗೆನಿಸುವದೆಂದು ಹೇಳಲಿಕ್ಕೆ ಬರುವದಿಲ್ಲ. ಶಬ್ದಗಳು ಪದಾರ್ಥಗಳನ್ನು ಸೂಚಿಸುತ್ತವೆ ಮಗು ಮೊದಲು ಪದಾರ್ಥವನ್ನು ನೋಡುತ್ತದೆ. ಅನಂತರ ಶಬ್ದಗಳನ್ನು ಕಲಿಯುತ್ತದೆ. ಆ ಶಬ್ದಗಳಿಂದ ಅದು ಎರಡನೆಯವರಿಗೆ ಅದನ್ನು ವರ್ಣಿಸುತ್ತದೆ. ಈ ಪದ್ಧತಿ ಬಾಲ್ಯದಿಂದಲೆ ಪ್ರಾರಂಭವಾಗುತ್ತದೆ ಮತ್ತು ಜೀವನದಲ್ಲೆಲ್ಲ ಇದು ಸಾಗುತ್ತದೆ. ಇಂಥದೊಂದು ವಿಶಿಷ್ಟ ವಸ್ತುವಿಗೆ ಒಂದು ಶಬ್ದವನ್ನುಪಯೋಗಿಸುವದನ್ನು ಕಲಿತು ನಂತರ ಮತ್ತೊಂದು ಶಬ್ದ ಕಲಿಯಬೇಕಾದರೆ ಅದಕ್ಕೆ ಸ್ವಾಭಾವಿಕವಾಗಿ ಆಯಾಸವೆನಿಸುತ್ತದೆ. ವಿಶೇಷವಾಗಿ ಬೇರೆ ಮಕ್ಕಳು ಆ ಶಬ್ದ ಉಪಯೋಗಿಸುವದನ್ನು ಕೇಳದಿರುವಾಗ ಬಹಳ ಪ್ರಯತ್ನದಿಂದ ಅದನ್ನು ನೆನೆಪಿನಲ್ಲಿಡುವ ಪ್ರಸಂಗದಲ್ಲಿ ಅದಕ್ಕೆ ಮತ್ತಷ್ಟು ಪ್ರಯಾಸ. ವಸ್ತುತಃ ಈ ಆಯಾಸ ಬಹಳ ಎನಿಸುವದರಿಂದ ಆ ಮಗು ಒಂದೇ ಶಬ್ದವನ್ನು ನೆನಪಿನಲ್ಲಿಡುತ್ತದೆ. ಅದರೆ ಯಾವ ವಸ್ತುವನ್ನು ವರ್ಣಿಸುವದೊ ಆ ವಸ್ತುವಿನ ಪರಿಜ್ಞಾನವೇ ಆದಕ್ಕುಳಿಯುವದಿಲ್ಲ. ಪರದೇಶಿ ಭಾಷೆ ಶಿಕ್ಷಣ ಮಾಧ್ಯಮವಾಗಿರುವಾಗ ಶಬ್ದಗಳನ್ನು ನೆನಪಿನಲ್ಲಿಡುವದಕ್ಕೆ ಮಕ್ಕಳು ಪ್ರಯಾಸಪಡಬೇಕಾಗುವದಲ್ಲದೆ ಕಲಿಸಿದುದನ್ನೆಲ್ಲ ತಿಳಿದುಕೊಳ್ಳಲಿಕ್ಕೆ ದೀರ್ಘ ಪ್ರಯತ್ನ ಮಾಡಬೇಕಾಗುತ್ತದೆ. ಈ ರೀತಿಯಾಗಿ "ಘೋಕ" ಹಾಕುವ ಪ್ರವೃತ್ತಿಗೆ ಪ್ರೋತ್ಸಾಹ ಕೊಟ್ಟಂತಾಗುತ್ತದೆ; ಆಕಲನಶಕ್ತಿಯೂ ಕುಂಠಿತವಾಗುತ್ತದೆ.

ಇದೆಲ್ಲ ಸ್ವತಃಸಿದ್ಧವಾಗಿದೆ. ಆದರೆ ನಮ್ಮ ಶಿಕ್ಷಣ ಪದ್ಧತಿಯು ನಮ್ಮನ್ನು ಗುಲಾಮರನ್ನಾಗಿ ಮಾಡುವಂತಹದಾಗಿದೆ. ನಮ್ಮಲ್ಲನೇಕರು ಈ ಬಗೆಯ ಸರಳ ಸಮಸ್ಯೆಯನ್ನು ಪೂರ್ಣವಾಗಿ ತಿಳಿದುಕೊಳ್ಳುವುದಿಲ್ಲ. ಮೂವತ್ತು ವರುಷಗಳ ಹಿಂದೆ ಸ್ಯಾಡ್ಲರ ಸಮಿತಿಯವರು ಮಾತೃಭಾಷೆಯೆ ಶಿಕ್ಷಣ ಮಾಧ್ಯಮವಾಗಿರಬೇಕೆಂದು ಸೂಚಿಸಿದರು. ಅನಂತರ ಮಹಾತ್ಮಾ ಗಾಂಧಿಯವರು ಹಿಂದೀ ರಾಜಕೀಯ ರಂಗವನ್ನು ಪ್ರವೇಶಿಸಿ ದೇಶವ್ಯಾಪಕ ತಮ್ಮ ಚಳವಳಿಯನ್ನು ಪ್ರಾರಂಭಿಸಿದಾಗ ಇಂಗ್ಲಿಶ್ ಮಾಧ್ಯಮದಿಂದ ನಮ್ಮ ಸುಧಾರಣೆಗೆ ಸಹಾಯವಾಗಿಲ್ಲ ಇಷ್ಟೇ ಅಲ್ಲ ಅದು ನಮ್ಮ ಅನವತಿಗೆ ಕಾರಣವಾಗಿದೆಂದು ಒತ್ತಿ ಹೇಳಹತ್ತಿದರು. ಈ ಕಾಲದಲ್ಲಿ ಕೆಲ ವಿದ್ಯಾಪೀಠಗಳು ಇಲ್ಲವೆ ರಾಷ್ಟ್ರೀಯ ವಿಶ್ವವಿದ್ಯಾಲಯಗಳು ಅಸ್ತಿತ್ವದಲ್ಲಿ ಬಂದವು. ಅವುಗಳ ಮೇಲೆ ಸರಕಾರ ನಿಯಂತ್ರಣವಿಲ್ಲದ್ದರಿಂದ ತಮ್ಮದೇ ಆದ ಪದ್ಧತಿಯನ್ನನುಸರಿಸಲು ಅವು ಸ್ವತಂತ್ರವಾಗಿದ್ದವು. ಮತ್ತು ತಮ್ಮದೇ ಶಿಕ್ಷಣ ಮಾಧ್ಯಮವನ್ನನುಸರಿಸಲೂ ಅವು ಸ್ವತಂತ್ರವಾಗಿದ್ದವು. ದೇಶಭಾಷೆಗಳ ಮಾಧ್ಯಮದಿಂದ ಶಿಕ್ಷಣ ಕೊಡಲು ಅವು ಪ್ರಯತ್ನಿಸಿದವು ಮತ್ತು ಉಚ್ಚ ಶಿಕ್ಷಣವನ್ನು ದೇಶ ಭಾಷೆಗಳ ಮಾಧ್ಯಮದಿಂದ ಕೊಡುವದು ಶಕ್ಯವಿದೆಂಬುದಾಗಿ ತೋರಿಸಿ ಕೊಟ್ಟವು. ದೇಶ ಭಾಷೆಯಲ್ಲಿ ಕಲಿಸುವದಕ್ಕೆ ಕಡಮೆ ಸಮಯ ಹತ್ತುವುದೆಂದೂ ಅವು ನಿದರ್ಶನಕ್ಕೆ ತಂದು ಕೊಟ್ಟವು ಮತ್ತು ವಿದ್ಯಾರ್ಥಿಗಳು ಕಲಿತ ವಿಷಯಗಳ ಬಗ್ಗೆ ಹೆಚ್ಚು ತಿಳಿದುಕೊಂಡರೆಂಬುದನ್ನು ಸಿದ್ಧಮಾಡಿ ತೋರಿಸಿದವು. ಇಷ್ಟೆಲ್ಲ ಆದರೂ ಬ್ರಿಟಿಶ ಹಿಂದುಸ್ತಾನದಲ್ಲಿಯ ಒಂದಾದರೂ ವಿಶ್ವವಿದ್ಯಾಲಯ ಇಂಗ್ಲಿಶನ್ನು ಬಿಟ್ಟುಗೊಟ್ಟು ಕೆಳಗಿನ ತರಗತಿಗಳಿಂದ ಮೇಲಿನ ತರಗತಿಗಳ ವರೆಗಿನ ಶಿಕ್ಷಣವನ್ನೆಲ್ಲ ದೇಶ ಭಾಷೆಗಳ ಮಾಧ್ಯಮದಿಂದ ಕೊಡುವ ಉಪಕ್ರಮವನ್ನು ನಡೆಸಿಲ್ಲ. ದೇಶ ಭಾಷೆಯ ಮಾಧ್ಯಮದಿಂದ ಶಿಕ್ಷಣ ಕೊಡಲಾಗುವದೆಂದು ನಿಮ್ಮ ವಿಶ್ವವಿದ್ಯಾಲಯ ನಿರ್ಧರಿಸಿ ಒಳ್ಳೆ ಉದಾಹರಣೆಯನ್ನು ಹಾಕಿಕೊಟ್ಟಿದೆ ನಿಮ್ಮನ್ನೇ ಅನುಸರಿಸಿದರೆ ಉಳಿದ ವಿಶ್ವವಿದ್ಯಾಲಯಗಳು ನಿಜ ಶಿಕ್ಷಣ ಕೊಡುವಲ್ಲಿ ಆವಶ್ಯಕ ಸಹಾಯವನ್ನು ಸಲ್ಲಿಸಿದಂತಾಗುವದು.

ಇಂಥದೆ ನಿರ್ಣಯವನ್ನು ತೆಗೆದುಕೊಳ್ಳಲು ಬೇರೆ ವಿಶ್ವವಿದ್ಯಾಲಯಗಳಿಗೆ ಬಂದಿರುವ ಅಡಚಣೆಗಳನ್ನೂ ನಾನು ಬಲ್ಲೆ. ಪ್ರಯತ್ನವಿಲ್ಲದೆ ಯಾವ ಅಡಚಣೆಗಳನ್ನೂ ನಿವಾರಿಸಲಾರೆವು. ಪ್ರಯತ್ನ ಮಾಡದಿರುವದು ಹೇಡಿತನ ಅನೇಕ ಜನ ಸ್ವಭಾವತಃ ಆಲಸಿಗರಾಗಿರುವರು. ಕೇವಲ ಶಾರೀರಿಕ ಅಲಸ್ಯವಿಷ್ಟೇ ಅಲ್ಲ ಮಾನಸಿಕ ಅಲಸ್ಯವೂ ಇದೆ. ಅನೇಕರು ಈ ಮಾನಸಿಕ ಅಲಸ್ಯದಿಂದ ಬಳಲುತ್ತಾರೆ. ಈ ಕೊಳಚೆಯಿಂದ ಪಾರಾಗಲು ನಾವು ಪ್ರಯತ್ನಿಸುವದಿಲ್ಲ. ಹಳೆಯ ಸಂಪ್ರದಾಯಗಳನ್ನು ಮುರಿಯಲು ಪ್ರಯತ್ನಿಸುವಲ್ಲಿ ತೊಡಗುವದೆಂದರೆ ಉತ್ಸಾಹದ ಹಾಳೆಂದು ದಾವು ತಿಳಿದುಕೊಂಡಂತೆ ಕಾಣುತ್ತದೆ. ನಮ್ಮಲ್ಲಿ ಈ ಜಾಡ್ಯವು ತಲೆದೋರಿದ್ದರಿಂದಲೆ ನಮ್ಮ ವಿಶ್ವವಿದ್ಯಾಲಯಗಳು ತಮ್ಮ ಹಳೆಯ ಸಂಪ್ರದಾಯಗಳನ್ನೇ ಅನುಸರಿಸುತ್ತ ಬಂದಿವೆ.

ಇಲ್ಲದಿದ್ದರೆ ಮೇಲಿನ ವರ್ಗದವರಿಗೆ ಯಾವ ವಿಷಯಗಳನ್ನು ದೇಶ ಭಾಷೆಯಲ್ಲಿ ಕಲಿಸುವದು ಕಠಿಣ ಹೋಗುವದೊ ಅಂಥ ವಿಷಯಗಳ ಪಠ್ಯಪುಸ್ತಕಗಳು ದೇಶ ಭಾಷೆಗಳಲ್ಲಿಯೂ ಸಾಕಷ್ಟು ಹೊರಡದಿರುವದಕ್ಕೆ ಬೇರೆ ಯಾವ ಕಾರಣವೂ ಇರುವುದಿಲ್ಲ. ಪಠ್ಯಪುಸ್ತಕಗಳ ಕೊರತೆಯಿದ್ದರೂ ಶಿಕ್ಷಣ ಮಾಧ್ಯಮವನ್ನು ಬದಲಿಸಿ ನಿಮ್ಮ ವಿಶ್ವವಿದ್ಯಾಲಯ ಧೈರ್ಯ ಮತ್ತು ಮುನ್ನೋಟವನ್ನು ತೋರಿಸಿದೆ. ಈ ಸಂಬಂಧದಲ್ಲಿ ಮುನ್ನಗ್ಗಿ, ಬಂದ ಮತ್ತು ಬರುವ ಅಡಚಣಿಗಳನ್ನೆಲ್ಲ ನಿವಾರಿಸಿಕೊಳ್ಳುವದು ಜಾಣತನದ್ದಾಗಿದೆ. ಅಡಚಣಿಯನ್ನು ನಿವಾರಿಸಿಕೊಳ್ಳಲಿಕ್ಕೆ ಇದೊಂದೇ ಮಾರ್ಗ. ಯಾವದೊಂದು ಕಾರ್ಯ ಮಾಡಬೇಕೆಂದು ನಿಜವಾಗಿ ಬಯಸಿದರೆ ಅದನ್ನು ನಿರ್ವಹಿಸಲು ಸಾಧನಗಳು ತಾನಾಗಿಯೆ ದೊರೆಯುವವು ಎಂಬದನ್ನು ನಿಮ್ಮ ವಿಶ್ವವಿದ್ಯಾಲಯ ತೋರಿಸಿಕೊಟ್ಟಿದೆ. ಅದು ಅಚಲ ನಿರ್ಧಾರದಿಂದ ಮುಂದೆ ಸಾಗುವದೆಂದು ಆಸಿಸುತ್ತೇನೆ. ದೇಶ ಭಾಷೆಗಳಲ್ಲಿಯೆ ಕೆಳಗಿನ ಮತ್ತು ಮೇಲಿನ ವರ್ಗಗಳಲ್ಲಿ ಪಾಠ ಹೇಳುವದು ನಡೆಯಹತ್ತಿದಾಗ ವಿದ್ಯಾರ್ಥಿಗಳ ವೇಳೆಯಲ್ಲಿ ಬಹಳ ಉಳಿತಾಯವಾದುದು ನಿಮಗೆ ಕಂಡುಬರುವದು. ಅವರ ಜ್ಞಾನ ಹೆಚ್ಚು ವಿಶಾಲವಾಗುವದು ಮತ್ತು ಅವರ ಮಾನಸಿಕ ಶಕ್ತಿ ಪರಿಪೂರ್ಣ ವಿಕಾಸಹೊಂದಿ ಅವರು ಜೀವನಪಥದಲ್ಲಿ ಪ್ರವೇಶಿಸುವರು.

## ಇಂಗ್ಲೀಶಿನ ಸ್ಥಾನ

ನಮ್ಮ ಶಾಲೆ ಮತ್ತು ಕಾಲೇಜುಗಳಲ್ಲಿ ದೇಶ ಭಾಷೆಯನ್ನು ಪ್ರಾರಂಭಿಸಿದ ಕೂಡಲೆ ಪರದೇಶೀ ಭಾಷೆಗಳನ್ನು ಕಲಿಸುವ ಸೌಕರ್ಯವನ್ನ ಒದಗಿಸುವದಿಲ್ಲ ಅಥವಾ ಆ ಭಾಷೆ ಕಲಿಸುವದು ನಮಗೆ ಬೇಡ ಎಂದಾಗುವದಿಲ್ಲ. ಜಗತ್ತಿನಲ್ಲಿ ಯಾವ ರಾಷ್ಟ್ರವೂ ಏಕಾಕಿಯಾಗಿ ಬಾಳಲಾರದು. ಪ್ರತಿಯೊಂದು ತಾಷ್ಟ್ರ ಬಾಹ್ಯ ಜಗತ್ತಿನೊಡನೆ ಸಂಬಂಧವಿಟ್ಟುಕೊಳ್ಳಬೇಕಾಗುತ್ತದೆ. ಇದಕ್ಕಾಗಿ ಪರದೇಶೀ ಭಾಷೆಗಳ ಜ್ಞಾನ ಅವಶ್ಯ. ಆದರೆ ಯಾವದೊಂದು ದೇಶದ ಎಲ್ಲ ಜನರೇನು ಪರದೇಶಗಳೊಡನೆ ಸಂಬಂಧವಿಟ್ಟುಕೊಳ್ಳಲಾರರು. ಕೆಲವೇ ಜನರು ಮಾತ್ರ ಪರದೇಶಸ್ಥರೊಡನೆ ಸಂಬಂಧವಿಟ್ಟುಕೊಳ್ಳುವರು. ಅವರು ಮಾತ್ರ ಪರದೇಶೀ ಭಾಷೆಯನ್ನು ಕಲಿಯತಕ್ಕದ್ದು. ಜಾಗತಿಕ ವಿಚಾರಗಳನ್ನೆಲ್ಲ ತಿಳಿಯಬಯಸುವವರೂ ಪರದೇಶೀ ಭಾಷೆಗಳನ್ನು ಕಲಿಯಬೇಕಾಗುತ್ತದೆ. ಪರದೇಶ ಸಂಚಾರ ಮಾಡಬಯಸುವವರು ಪರರಾಷ್ಟ್ರಗಳೊಡನೆ ವ್ಯಾಪಾರ ಮಾಡಬಯಸುವವರು ಪರದೇಶಿ ಭಾಷೆಯನ್ನು ಕೆಲಮಟ್ಟಿಗೆ ಕಲಿಯಲಿಕ್ಕೆ ಬೇಕಾಗುವದು. ಆದರೆ ಇಂಥ ಜನರು ಕೇವಲ ಕೆಲ ಜನರು ಮಾತ್ರ. ದೇಶದ ಜನಸಂಖ್ಯೆಯಲ್ಲಿ ಇವರು ಅಂಶ ಮಾತ್ರ. ಅವರಾದರೂ ತೀರ ಅವಶ್ಯವಿದ್ದಷ್ಟು ನೈಪುಣ್ಯನನ್ನು ಪಡೆಯಬೇಕಾಗುವದು.

ಆದರೆ ಪ್ರತಿಯೊಂದು ದೇಶದಲ್ಲಿ ಪರದೇಶೀ ಭಾಷೆಗಳಲ್ಲಿ ಬರೆದ ಅತ್ಯುತ್ತಮ ಪುಸ್ತಕಗಳನ್ನು ತಮ್ಮ ಭಾಷೆಗಳಲ್ಲಿ ಅನುವಾದಿಸುವ ಜನರು ಇರಲಿಕ್ಕೆಬೇಕಾಗುವದು. ಇದಕ್ಕಾಗಿ ಜನ ಪರದೇಶೀ ಭಾಷೆಯನ್ನು ಕಲಿಯಬೇಕಾಗುವದು. ಪರದೇಶಗಳನ್ನು ಸಂದರ್ಶಿಸಬೇಕಾದವರಿಗೆ ಅವಶ್ಯಕ ಸೌಕರ್ಯಗಳನ್ನೊದಗಿಸಬೇಕಾಗುವದು. ಆದರೆ ೧೦೦ ರಲ್ಲಿ ೯೯ ಜನ ಸ್ವದೇಶದಲ್ಲಿಯೆ ಉಳಿಯುವರೆಂಬದನ್ನು ಮಾತ್ರ ನಾವು ಮರೆಯಕೂಡದು ಅವರಿಗೆ ಪರದೇಶಿ ಭಾಷೆಗಳ ಜ್ಞಾನ ಅವಶ್ಯವಿಲ್ಲೆಂಬದನ್ನೂ ನಾವು ಮರೆಯಕೂಡದು. ಈ ರೀತಿ ವಿಶ್ವವಿದ್ಯಾಲಯಗಳು ೧೦೦ ರಲ್ಲಿ ಒಬ್ಬನಿಗೆ ಪರದೇಶೀ ಭಾಷೆಯ ಶಿಕ್ಷಣ ಕೊಡುವ ಸೌಕರ್ಯವನ್ನು ಒದಗಿಸುತಿರುವಾಗಲೆ ಉಳಿದ ೯೯ ಜನರ ಶಿಕ್ಷಣವನ್ನು ಅಲಕ್ಷಿಸಕೂಡದು.

---

## ಹಿಂದುಸ್ತಾನದ ಗೆಲವು

( ೯ನೇ ಪುಟದಿಂದ )

ಯಲು ಸಹಾಯವಾಯಿತು. ಚೀನ, ರಶಿಯಾ, ಫ್ರಾನ್ಸ ಮತ್ತು ಹಲವು ಏಶಿಯದ ರಾಜ್ಯಗಳು ವಿವಿಧ ಮತಗಣನೆಯಲ್ಲಿ ಹಿಂದುಸ್ತಾನಕ್ಕೆ ಬೆಂಬಲವಿತ್ತರೆ ಅಮೇರಿಕೆ, ಬ್ರಿಟನ್, ಕಾನಡಾ, ನೆದರ್ಲಂಡ್ಸ, ಬೆಲ್ಜಿಯಂ ಮೊದಲಾದ ರಾಷ್ಟ್ರಗಳು ವಿರುದ್ಧ ಪಕ್ಷದಲ್ಲಿದ್ದದು ಗಮನಾರ್ಹವಾಗಿದೆ.

ದಕ್ಷಿಣ ಅಫ್ರಿಕೆಯಲ್ಲಿ ಅಗ್ನೇಯ ಅಫ್ರಿಕೆಯನ್ನು ಸೇರಿಸಿಬಿಡಬೇಕೆಂಬ ಪ್ರಶ್ನೆಯಲ್ಲಿಯೂ ಜನರಲ್ ಸ್ಮಟ್ಸರಿಗೆ ಹಿಂದೀ ಪ್ರತಿನಿಧಿಗಳಿಂದ ಅಷ್ಟೇ ಆವೇಶದ ವಿರೋಧ ಎದುರಾಯಿತು. ಇಲ್ಲಿಯೂ ದಕ್ಷಿಣ ಅಫ್ರಿಕನ್ ಮುಖ್ಯ ಮಂತ್ರಿಗೆ ದೊರೆತ ಸೋಲು ಸರಿಯಾಗಿಯೇ ಇತ್ತು.

ದಕ್ಷಿಣ ಅಫ್ರಿಕೆಯಲ್ಲಿ ಹಿಂದೀಯರ ಹೋರಾಟದ ಆರಂಭದಿಂದಲೇ ನಮಗೆ ದೊರೆತ ಯಶಸ್ಸಿನ ಬಹು ಭಾಗ ಹಿಂದೀ ಸ್ತ್ರೀಯರು ಅದರಲ್ಲಿ ವಹಿಸಿದ ಭೂಮಿಕೆಯ ಪರಿಣಾಮವೇ ಆಗಿತ್ತೆಂಬುದು ನೆನಪಿನಲ್ಲಿಡಬೇಕಾದ ಮಾತು. ಸ್ವರ್ಗೀಯ ಕಸ್ತೂರಬಾ ಗಾಂಧಿ ಮತ್ತು ಶ್ರೀಮತಿ ಸರೋಜಿನಿ ಇವರ ಹೆಸರುಗಳು ಯಾವಾಗಲೂ ಅಭಿಮಾನ ಅದರಗಳಿಂದ ನೆನೆಯಲ್ಪಡುತ್ತವೆ. ಈಗ ಪುನಃ ರಂಗದಲ್ಲಿ ಮೆರೆದಾಕೆ ಇನ್ನೊಬ್ಬ ಭಾರತ ಪುತ್ರಿಯೆ—ಬಹಳ ಮಾಡಿ ಯುಕ್ತ ರಾಷ್ಟ್ರ ಸಂಘದ ಏಕಮಾತ್ರ ಮಹಿಳಾ ಪ್ರತಿನಿಧಿ ಇರಬೇಕು ಅವಳು. ಅವಳು ನಿಜವಾಗಿ ಜಗತ್ತಿನ ದೃಷ್ಟಿಯಲ್ಲಿ ಹಿಂದುಸ್ತಾನದ ಗೌರವವನ್ನು ಹೆಚ್ಚಿಸಿದ್ದಾಳೆ.

ಹಿಂದುಸ್ತಾನಕ್ಕೆ ಬೆಂಬಲವಿತ್ತ ೩೧ ರಾಷ್ಟ್ರಗಳೂ ನಮ್ಮ ಹೃತ್ಪೂರ್ವಕ ಧನ್ಯವಾದಗಳಿಗೆ ಪಾತ್ರವಾಗಿವೆ. ಮೂಲಭೂತ ಮಾನವ ಹಕ್ಕು ಸಂಬಂಧಗಳ ಧ್ಯೇಯವನ್ನು ಎತ್ತಿ ಹಿಡಿದು ಅವರು ಯುಕ್ತ ರಾಷ್ಟ್ರ ಸಂಸ್ಥೆಯ ಗೌರವವನ್ನಷ್ಟೇ ಹೆಚ್ಚಿಸಲಿಲ್ಲ; ದಲಿತ ರಾಷ್ಟ್ರಗಳಲ್ಲಿ ಹೊಸ ಆಶೆ ಮೊಳೆಯುವಂತೆಯೂ ಮಾಡಿದ್ದಾರೆ.

ವಾಪಿ — ಕಿಶೋರಲಾಲ ಮಶ್ರೂವಾಲಾ

೧೨—೧೨—೪೬

---

## ಒಂದು ಪ್ರಶಂಸಾರ್ಹ ಹಸ್ತಪತ್ರಿಕೆ

ಡಾಕಾದ ಮೌಲವಿ ಅಹಸನುಲ್ಲಾ ಅವರು ಗಾಂಧೀಜಿಗೆ "ಪವಿತ್ರ ಕುರಾಣದ ದಾನಗಳು" ಎಂಬ ಹೆಸರಿನ ಒಂದು ಬಂಗಾಲಿ ಹಾಗು ಒಂದು ಉರ್ದು ಹಸ್ತಪತ್ರಿಕೆಗಳನ್ನು ಕಳಿಸಿದ್ದಾರೆ. ಎರಡೂ ಜಾತಿಯ ಜನರಿಗೆ ಮೌಲವೀ ಸಾಹೇಬರು ಅದನ್ನು ಪುಕ್ಕಟೆಯಾಗಿ ಹಂಚುತಿದ್ದಾರೆ. ಅದೊಂದು ಪ್ರಶಂಸಾರ್ಹ ಹಸ್ತಪತ್ರಿಕೆ. ಅದರಲ್ಲಿ ಒತ್ತಿ ಹೇಳಿದ ಕೆಲ ವಿಷಯಗಳನ್ನು ಇಲ್ಲಿ ಕೊಡುವೆ:

ಇಸ್ಲಾಮದ ಉಪದೇಶಗಳನ್ನು ತಾವಾಗಿಯೆ ಅರಿತುಕೊಳ್ಳಲು ಸಮರ್ಥರಾಗುವಂತೆ ಮುಸ್ಲಿಂ ಸ್ತ್ರೀ ಪುರುಷರೆಲ್ಲರೂ ಓದು ಬರೆಹ ಕಲಿಯಬೇಕೆಂದು ಅದು ಕೇಳಿಕೊಳ್ಳುತ್ತದೆ. ಪೂಜ್ಯ ಮಹಮ್ಮದರು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿದ್ದು: "ಜ್ಞಾನಾರ್ಜನೆ ಮಾಡುವದು ಪ್ರತಿಯೊಬ್ಬ ಮುಸಲ್ಮಾನ ಪುರುಷನ ಮತ್ತು ಪ್ರತಿಯೊಬ್ಬ ಮುಸಲ್ಮಾನ ಸ್ತ್ರೀಯ ಕರ್ತವ್ಯ. ಜೀವನದಲ್ಲಿ ಅನುಕೂಲಸ್ಥರಾದರೂ ವಿದ್ಯಾಭ್ಯಾಸ ಮಾಡಿರಿ"

ಇಸ್ಲಾಮವೆಂಬುದು ಶಾಂತಿ ಸೇವೆಗಳ ಧರ್ಮ. ಅದರ ಐದು ಸೂತ್ರಗಳು ಇಂತಿವೆ: "ಕಲಮಾ" ಅಂದರೆ ಉಕ್ತಿ "ನಮಾಜ" ಅಂದರೆ ಪ್ರಾರ್ಥನೆ, "ರೋಝಾ" ಅಂದರೆ ಉಪವಾಸ, "ಝುಕತ್" ಅಂದರೆ ದಾನ ಧರ್ಮ ಮತ್ತು "ಹಾಜ" ಅಂದರೆ ತೀರ್ಥಯಾತ್ರೆ. ಮೊದಲನೆ ಮೂರು ಎಲ್ಲರಿಗೂ ವಿಧಿಸಲ್ಪಟ್ಟಿವೆ; ಉಳಿದೆರಡು ಅನುಕೂಲವಂತರಿಗಷ್ಟೆ.

ಕುರಾಣಕ್ಕನುಸಾರವಾಗಿ ಈ ಕೆಳಗಿನ ನಿಯಮಗಳನ್ನು ಪಾಲಿಸಿದರೆ ಐಹಿಕ ಅಮುಷ್ಮಿಕ ಸುಖ ದೊರೆಯುತ್ತದೆ:

೧. ಪ್ರಭಾತದಲ್ಲಿ ತಪ್ಪೊಪ್ಪಿಗೆಯ ಪ್ರಾರ್ಥನೆ;

೨. ಪೂರ್ವಾಹ್ನದಲ್ಲಿ ನರಕದ ಬೆಂಕಿಯಿಂದ ಉಳಿಸೆಂದು ಪ್ರಾರ್ಥನೆ;

೩. ಸಾಯಂಕಾಲದಲ್ಲಿ ಋಣವಿಮೋಚನಾ ಪ್ರಾರ್ಥನೆ;

೪. ಸಂಧ್ಯಾಕಾಲದಲ್ಲಿ ಶತ್ರುಗಳಿಂದ ಕಾಪಾಡೆಂದು ಪ್ರಾರ್ಥನೆ;

೫. ರಾತ್ರಿಯಲ್ಲಿ ವಿಚಾರಣೆಯ ದಿನ ನ್ಯಾಯದಾನದಲ್ಲಿ ಪೂರ್ವಪ್ರಾಶಸ್ತ್ಯ ಕೊಡಬೇಕೆಂದು ಪಾರ್ಥನೆ;

೬. ದ್ರವ್ಯಾರ್ಜನೆಗಾಗಿ ವ್ಯಾಪಾರ ವೃತ್ತಿಗಳ ಉಪಕ್ರಮ

೭. ಶಾಂತಿ ಸಾಮರಸ್ಯಗಳ ಪ್ರಸಾರಕ್ಕಾಗಿ ದಾನ ಧರ್ಮ;

೮. ರೋಗ ನಿವಾರಣೆಗಾಗಿ ಸ್ನಾನ ಮತ್ತು ಶುದ್ಧ ಜೀವನ;

೯. ಕೀರ್ತಿಗಾಗಿ ವಿದ್ಯೆ ಸಂಸ್ಕೃತಿಗಳ ಉಪಕ್ರಮ; ಮತ್ತು

೧೦. ನಾಯಕತ್ವಕ್ಕಾಗಿ ಪ್ರಾರ್ಥನೆ, ಸೇವೆ, ವಿನಯ ಮತ್ತು ಸಭ್ಯತೆ.

ಮಹಾತ್ಮನಾದ ಪೀರ ದಸ್ತಗೀರ ರಹಮತುಲಾ ಅವರು ಹೇಳಿದ್ದು: "ಪರಮಾತ್ಮನ ಮಾರ್ಗದಲ್ಲಿ ನಡೆಯಬಯಸುವವರು ಈ ಕೆಳಗಿನ ಹತ್ತು ಗುಣಗಳನ್ನು ಅಭ್ಯಸಿಸಬೇಕು:

೧. ಆಣೆ ಹಾಕದಿರುವದು;

೨. ವಿನೋದಕ್ಕಾದರೂ ಸುಳ್ಳು ಹೇಳದಿರುವದು;

೩. ಭಾಷೆಗೆ ತಪ್ಪದಿರುವದು;

೪. ಅಲ್ಲಾನ ಸೃಷ್ಟಿಯಲ್ಲಿ ನೀಚತಮವಾದುದನ್ನೂ ತಿರಸ್ಕರಿಸದಿರುವದು; ಮತ್ತು ಅದನ್ನು ಮನೋವಾಕ್ಕಾಯಗಳಿಂದ ಹಿಂಸಿಸದಿರುವದು;

೫. ಶಾಪ ಕೊಡದಿರುವದು;

೬. ಅಸ್ತಿಕನನ್ನು ಕಪಟಿಯೆಂದಾಗಲಿ ಪಾಖಂಡಿಯೆಂದಾಗಲಿ ನಿಂದಿಸದಿರುವದು;

೭. ಪಾಪಕೃತ್ಯಗಳಿಂದ ದೂರವಿರುವದು;

೮. ಮಾನವಜೀವಿಯ ಮೇಲೆ ಹೊರೆ ಹೊರಿಸದಿರುವದು;

೯. ಪರದ್ರವ್ಯಕ್ಕೆ ಬಾಯ್ಬಿಡದಿರುವದು;

೧೦. ವಿನಯಶೀಲರಾಗಿರುವದು.

ವಾಪಿ — ಕಿಶೋರಲಾಲ ಮಶ್ರೂವಾಲಾ

೧೧-೧೨-೪೬

---

# ಕರ್ನಾಟಕ

## ಧಾರವಾಡ

ಗದಗ ಸರಾಫ ಸಂಘದ ಅಧ್ಯಕ್ಷರಾದ ಶ್ರೀ ಭಗವಾನದಾಸ ಕೃಷ್ಣದಾಸ ಪುಣೇಕರ ತಮ್ಮ ೫೫ನೇ ವಯಸ್ಸಿನಲ್ಲಿ ಮಲೇರಿಯಾ ಜ್ವರದಿಂದ ನಿಧನಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ.

ಧಾರವಾಡ ಜಿಲ್ಹೆಯಲ್ಲಿ ಧಾನ್ಯದ ಎತ್ತುವಳಿಯ ಪ್ರಮಾಣ ೧೦೦ಕ್ಕೆ ೧೫ ರಷ್ಟು ರಾಗಿ, ಸಾವಿ ಹಾಗು ನವಣೆ ಸ್ವೀಕರಿಸಲು ಅಪ್ಪಣೆ ಕೊಡಲಾಗಿದೆ.

ಅಖಿಲ ಕರ್ನಾಟಕ ಆಯುರ್ವೇದ ಪರಿಷತ್ತು ಗದುಗಿನಲ್ಲಿ ಬರುವ ಜಾನೆವಾರಿ ೮ನೇ ತಾರೀಕು ಕೂಡುವದು.

ಧಾರವಾಡ ಕರ್ನಾಟಕ ಕಾಲೇಜಿನ ಹಳೆಯ ವಿದ್ಯಾರ್ಥಿಗಳ ಸಂಘದ ಉದ್ಘಾಟನ ಸಮಾರಂಭ ರವಿವಾರ ೧೫ನೇ ತಾರೀಕು ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲ ಕೋರಿಯಾ ಇವರ ಹಸ್ತದಿಂದ ಜರುಗಿತು. ಸುಮಾರು ನೂರು ಹಳೆಯ ವಿದ್ಯಾರ್ಥಿಗಳು ಬಂದಿದ್ದರು ತಮ್ಮ ವಿದ್ಯಾಮಂದಿರದ ಗೂಡ ಸಂಬಂಧವನ್ನಿಟ್ಟುಕೊಳ್ಳಲು ಇಂಥ ಸಂಘಗಳು ಅವಶ್ಯವಾಗಿವೆಂದು ಹೇಳಿ ಪ್ರಿ. ಕೋರಿಯಾರವರು ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆ ಅವಶ್ಯವೆಂದೂ ಧಾರವಾಡವೆ ಅದಕ್ಕೆ ಯೋಗ್ಯ ಸ್ಥಳವೆಂದೂ ಹೇಳಿದರು.

ಶಿಗ್ಗಾವಿಯ ಅಬಕಾರಿ ಇನಸ್ಪೆಕ್ಟರ ಶ್ರೀ ಭಟ್ಟರು ಅಲ್ಲಿಯ ಶಿಂದೀ ಕಂಟ್ರಾಕ್ಟದಾರರ ಮನೆಯನ್ನು ಮುತ್ತಿ ೨೬ ಬಾಟ್ಲಿ ಸರೆಯನ್ನು ಜಪ್ತ ಮಾಡಿಕೊಂಡು ಹೋದರು.

ಧಾರವಾಡ ಹಾಟೆಲ್ ಒಡೆಯರ ಸಂಘದವರು ಪೂರ್ವಬಂಗಾಲ ಪರಿಹಾರ ಸಮಿತಿಗೆ ೨೦೦ ರೂಪಾಯಿ ಕೂಡಿಸಿ ಕಳಿಸಿರುವರು.

ಧಾರವಾಡ ಜಿಲ್ಹೆಯ ಕೆಲ ಭಾಗಗಳಲ್ಲಿ ಕುಟಾಗ್ರತೆಯ ಪರಿಸ್ಥಿತಿ ಎಂದು ಈ ಮೊದಲು ಸಾರಲಾಗಿದ್ದ ಅಜ್ಞೆಯನ್ನು ರದ್ದುಗೊಳಿಸಲಾಗಿದೆಂದು ಮುಂಬಯಿ ಸರಕಾರದವರು ಪ್ರಸಿದ್ಧಿಸಿದ್ದಾರೆ. ಹಾವೇರಿ, ರಾಣೇಬಿನ್ನೂರ ತಾಲೂಕಗಳಲ್ಲಿ ಡಿಸೆಂಬರ ೧೬ ರಿಂದಲೂ ಧಾರವಾಡ, ಹುಬ್ಬಳ್ಳಿ, ನವಲಗುಂದ, ನರಗುಂದ ಪೇಟಾದಲ್ಲಿ ೧೯೪೭ನೇ ಫೆಬ್ರುವರಿ ೧೯ರಿಂದ ಬರಗಾಲ ಪರಿಹಾರ ಯೋಜನೆಯೆಂದು ಕೊಡಲಾಗುತಿದ್ದ ಜೋಲನ್ನು ನಿಲ್ಲಿಸಲಾಗುವದು.

## ಬೆಳಗಾವಿ

ಬೆಳಗಾವಿಯ ವ್ಯಾಪಾರಸ್ಥರಾದ ಪಾಟಣೇಕರರು ಧಾನ್ಯವನ್ನು ವಿನಾಕಾರಣಜಪ್ತಮಾಡಿ ಮಾರಿದ್ದರ ಬಗ್ಗೆ ಪಾಟಣೇಕರರು ಕೋರ್ಟಿನಲ್ಲಿ ದಾವೆ ಹೂಡಿದ್ದರು. ಕೋರ್ಟಿನವರು ಅದನ್ನು ತೆಗೆದುಹಾಕಿದ್ದರು. ಇದೀಗ ಮುಂಬೈ ಸರಕಾರದವರು ಅದರ ವಿಚಾರಣೆ ಮಾಡಿ ಅದಹಾನಿಯ ಪರಿಹಾರವೆಂದು ಅವರಿಗೆ ೧೯೫೬ ರೂ. ಕೊಟ್ಟಿರುವರು. ಅದರ ಬಗ್ಗೆ ಶ್ರೀ ಬುರ್ಜಿ ಮತ್ತು ಇನಾಮದಾರರ ಮೇಲಿನ ಆರೋಪದ ವಿಚಾರಣೆ ನಡೆಸುವರು.

ಶ್ರೀ ನಿ. ಪ್ರ. ಸ. ಬಿದರಿ ಕುಮಾರ ಮಹಾಸ್ವಾಮಿಗಳ ಚರಿತ್ರೆಯನ್ನು ಪುರಾಣ ರೂಪದಲ್ಲಿ ಬರೆಯಲು ಶ್ರೀ ಸದಾಶಿವ ಶಾಸ್ತ್ರಿಗಳು ಹುಕ್ಕೇರಿ ಅವರು ಒಪ್ಪಿದ್ದು ಇವರ ವಿಷಯವಾಗಿ ಗೊತ್ತಿದ್ದವರು ಸವದತ್ತಿಯ ಕಲ್ಮಠಕ್ಕೆ ಜನೇವರಿ ೧೪ ರೊಳಗಾಗಿ ವಿವರ ಕಳಿಸಬೇಕಾಗಿ ತಿಳಿಸಲಾಗಿದೆ.

## ವಿಜಾಪುರ

ಮುದ್ದೇಬಿಹಾಳ ತಾಲೂಕಿನ ಗಡಿಸೋಮನಾಳದಲ್ಲಿ ವಿಶಾಖಾ ಮಳೆ ಬಹಳ ಆಗಿ ಮುಂಗಾರಿ ಬೆಳೆ ನವಣೆ, ಸಜ್ಜಿ, ಶೇಂಗಾ ಮೊದಲಾದ ಯಾವತ್ತೂ ಬೆಳೆ ಹಾಳಾಗಿಹೋಗಿ ಒಂದು ಮುಕ್ಕು ಕಾಳುಮನೆಗೆ ಬರುವಂತಿಲ್ಲ. ಬಿಳಿಜೋಳ ಸುಳಿ ಬಿದ್ದು ಹೋಗಿದೆ. ಗೋದಿಯ ಕ್ಷೇತ್ರದಲ್ಲಿ ಹೋದರೆ ಇಟ್ಟಂಗಿ ಧೂಳಿ ಮನುಷ್ಯನ ಗಂಟಲಕ್ಕೆ ಏರುತ್ತದೆ. ಇದರಿಂದ ರೈತರು ಭಯಭೀತರಾಗಿದ್ದಾರೆ.

ಬಾಗಲಕೋಟೆ ಬಸವೇಶ್ವರ ಆರ್ಟ್ಸ ಕಾಲೇಜಿನಲ್ಲಿ ಪ್ರಾಧ್ಯಾಪಕರು ತಮ್ಮ ತಮ್ಮ ವಿಷಯಗಳ ಮೇಲೆ ಉಪನ್ಯಾಸ ಕೊಡಲು ಪ್ರಾರಂಭಿಸಿರುವರು. ಊರೊಳಗಿನ ಸುಶಿಕ್ಷಿತ ಜನರಿಗೂ ಉಪನ್ಯಾಸಗಳಿಗೆ ಮುಕ್ತದ್ವಾರವಿದೆ. ಒಂದು ವಾರದ ವರೆಗೆ ಈ ಉಪನ್ಯಾಸಗಳು ನಡೆವವು.

ದಕ್ಷಿಣ ಭಾಗದ ಕಮೀಶನರ ಟ್ರಾಟಮನ್‌ರು ಬಾಗಲಕೋಟೆಗೆ ೧೬ನೇ ತಾರೀಕು ಭೆಟ್ಟಿಕೊಟ್ಟು ಅನಿರೀಕ್ಷಿತವಾಗಿ ರೇಶನ್ ಅಂಗಡಿಗಳನ್ನು ಸಂದರ್ಶಿಸಿದರು. ಮತ್ತು ಅಡಚಣೆ, ತಕರಾರುಗಳನ್ನು ಕೇಳಿಕೊಂಡರು. ಸಕ್ಕರಿ ಪ್ರಮಾಣ ಎಲ್ಲೆಡೆಯಲ್ಲಿಯೂ ಒಂದೇ ಇರಬೇಕೆಂದು ವಿನಂತಿಸಿದ್ದಕ್ಕೆ ಕಮೀಶನರರು ವಿಚಾರ ಮಾಡಿ ಮೇಲೆ ತಿಳಿಸಲಾಗುವದೆಂದು ಹೇಳಿದರು.

ವಿಜಾಪುರ ಜಿಲ್ಹೆಯ ಕಾಂಗ್ರೆಸ ಕೆಲಸಗಾರರಾಗಿದ್ದ ಶ್ರೀನಿವಾಸ ರಘುಪತಿರಾವ ದೇಶಪಾಂಡೆ ಕೊಲ್ಹಾರ ಇವರು ವಿಜಾಪುರದಲ್ಲಿ ೨೯ನೇ ತಾರೀಕಿನ ದಿನ ನಿಧನ ಹೊಂದಿದರು. ಇವರಿಗೆ ೧೯೩೦ ಮತ್ತು ೪೧ ರ ಚಳವಳಿಯಲ್ಲಿ ೧॥ ವರ್ಷ ಮತ್ತು ೧ ವರ್ಷ ಶಿಕ್ಷೆಯಾಗಿತ್ತು.

ಬಾಗಲಕೋಟೆ ನಗರ ಸಭೆಯ ಸದಸ್ಯರಾದ ಶ್ರೀ ಸಿಂಧೆ ಇವರು ಅದೇ ನಗರಸಭೆಯ ಮತ್ತೊಬ್ಬ ಸದಸ್ಯರಾಗಿರುವ ಶ್ರೀ ರಾಮಣ್ಣ ನಾಯಕ ಸೊಲ್ಲಾಪೂರರ ಮೇಲೆ ಗುಂಡ ಹಾರಿಸಿದ ಆರೋಪಕ್ಕಾಗಿ ರೆಸಿಡೆಂಟ ಕೋರ್ಟಿನಲ್ಲಿ ಖಟ್ಲೆ ನಡೆದು ಸೆಶನ್ಸ ಕಮಿಟ್ ಆಯಿತು.

## ಬಳ್ಳಾರಿ

ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿ ಮಠದ ಶ್ರೀಪಾದಪುತ್ರರಾದ ರಾ ಜಾ ಶ್ರೀ ಗುರುರಾಜಾಚಾರ್ಯರಿಗೆ ಅಯೋಧ್ಯಾ ಸಂಸ್ಕೃತ ಕಾರ್ಯಾಲಯದವರು ಅವರ ಸನಾತನ ಧರ್ಮ ಪ್ರದೀಪ ಗ್ರಂಥವನ್ನು ನೋಡಿ ಧರ್ಮಶಾಸ್ತ್ರಾಲಂಕಾರ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಿದ್ದಾರೆ.

## ಉತ್ತರ ಕನ್ನಡ

ಕಳೆದ ೧೬ನೇ ತಾರೀಕಿನಿಂದ ಒಬ್ಬ ಪ್ರೌಢನಿಗೆ ೧೫ ದಿನಕ್ಕೆ ತಲೆಕೊಡೆದ ೨ ಶೇರು ಅಕ್ಕಿಯನ್ನೂ ಉಳಿದ ಗೋದಿಯನ್ನೂ ಕೊಡಹತ್ತಿದ್ದರಿಂದ ಸಂತಾಪಗೊಂಡ ಜನರು ಸಿರಿಸಿ ಬಿಡ್ಕಿ ಬೈಲಿನಲ್ಲಿ ಸಭೆಸೇರಿ ಅಕ್ಕಿ ಸೀದಾ ಕಡಿಮೆ ಮಾಡಿದ್ದನ್ನು ನಿಷೇಧಿಸಿದರು. ಅಕ್ಕಿಯಿಲ್ಲದ್ದಕ್ಕಾಗಿ ಬಗೆ ಬಗೆಯ ರೋಗಾದಿಗಳು ಹಬ್ಬಬಹುದಾದ್ದರಿಂದ ಅಕ್ಕಿ ಸೀದಾವನ್ನೇ ಕೊಡಬೇಕೆಂದು ಕೇಳಿಕೊಳ್ಳಲಾಯಿತು.

ಸಿರಸಿಯಲ್ಲಿ ನಿಯಂತ್ರಿತ ಪದಾರ್ಥಗಳನ್ನು ಸರಕಾರದವರು ತಂದು ಪೂರೈಸುತಿರುವದಿಲ್ಲಾದ್ದರಿಂದ ಧಾರಣೆಗಳು ಮಿತಿಮೀರಿ ಏರಹತ್ತಿವೆ. ಉದಾಹರಣಾರ್ಥ ಹುಬ್ಬಳ್ಳಿಯಲ್ಲಿ ೧೦ ರೂ. ಗೆ ಒಂದು ಚೀಲ ಹತ್ತಿಕಾಳು ಸಿಕ್ಕುತಿದ್ದರೆ ಸಿರಸಿಯಲ್ಲಿ ೪೫ ರೂಪಾಯಿ ಕೊಟ್ಟರೂ ಸಿಕ್ಕುವದಿಲ್ಲ. ಅಧಿಕಾರಿಗಳು ಇತ್ತ ಲಕ್ಷಕೊಡಬೇಕಾಗಿ ಓರ್ವರು ಬಿನ್ನವಿಸುತ್ತಾರೆ.

ಕಾರವಾರದಲ್ಲಿ ಕಲ್ಲುಕಟುಕರ ಸಂಘವೊಂದನ್ನು ಮಾಡಬೇಕೆಂದು ಪ್ರಯತ್ನ ನಡೆದಿದೆ. ಈ ಸಂಘವನ್ನ ಸಹಕಾರ ಕಾಯದೆಯನ್ವಯ ರಜಿಸ್ಟರ ಮಾಡಿಸಿ ಹಣ ಸಂಗ್ರಹ ಮಾಡಿ ಸಣ್ಣ ಪುಟ್ಟ ಸರಕಾರಿ ಮತ್ತು ಇತರ ಕೆಲಸಗಳನ್ನು ಈ ಸಂಘದವರೆ ಹಿಡಿದು ಇದರಲ್ಲಿ ಬರುವ ಲಾಭವನ್ನು ಸಂಘದ ಸದಸ್ಯರಿಗೆ ವಹಿಸಿಕೊಡಬೇಕೆಂದು ಯೋಚಿಸಲಾಗಿದೆ. ಮಧ್ಯಸ್ಥಿ ಕಂತ್ರಾಟದಾರರ ಕೈವಾಡ ನಡೆಯದಂತೆ ಪ್ರಯತ್ನಿಸಲಾಗುವದು.

## ಕನ್ನಡ ಸಂಸ್ಥಾನ

ಗ್ವಾಲೇರ ಸಂಸ್ಥಾನದ ಮಂತ್ರಿಗಳೂ ಕಾರ್ಯಕಾರೀಮಂಡಳದ ಉಪಾಧ್ಯಕ್ಷರೂ ಆಗಿರುವ ಶ್ರೀ ಎಸ್. ಪಿ. ರಾಜಗೋಪಾಲಾಚಾರ್ಯರು ನಿವೃತ್ತಿಪೂರ್ವದ ೧ ವರ್ಷ ರಜೆ ತೆಗೆದುಕೊಂಡದ್ದರಿಂದ ಅವರ ಸ್ಥಳದಲ್ಲಿ ಮೈಸೂರು ಸಂಸ್ಥಾನದ ಮಂತ್ರಿಪದದಿಂದ ಇತ್ತೀಚೆ ನಿವೃತ್ತರಾಗಿರುವ ಎಂ. ಎ. ಶ್ರೀನಿವಾಸನ್‌ರನ್ನು ಮಂತ್ರಿಗಳನ್ನಾಗಿ ನೇಮಿಸಲಾಗಿದೆ.

ಬನಹಟ್ಟಿಯಲ್ಲಿ ಕೈ. ವಾ. ತಮ್ಮಣ್ಣಪ್ಪ ಚಿಕ್ಕೋಡಿಯವರ ೧೩ ನೇ ಪುಣ್ಯ ತಿಥಿ ಪ್ರೊ. ಬಿ. ಆರ್. ರಘುನಾಥರಾಯರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ವಿವಿಧ ಸ್ಪರ್ಧೆ, ದಿವಂಗತರ ಭಾವಚಿತ್ರದ ಮೆರವಣಿಗೆ ಮೊದಲಾದವುಗಳು ನಡೆದು ಕರ್ನಾಟಕದ ಸಮಸ್ಯೆಗಳ ಬಗ್ಗೆ ವಿಚಾರ ಪರಿಪ್ಲುತ ಭಾಷಣಗಳಾದವು. ಸ್ಪರ್ಧೆಗಳಲ್ಲಿ ಗೆದ್ದವರಿಗೆ ಆರ್. ಎಸ್. ಹೂಲಿಯವರ ಹಸ್ತದಿಂದ ಪಾರಿತೋಷಕ ಕೊಡಿಸಲಾಯಿತು.

ಕೊಪ್ಪಳದಲ್ಲಿ ೮-೧೦ ದಿನಗಳ ಹಿಂದೆ ಒಬ್ಬನು ಮಾರವಾಡಿ ಗೋರಾ ವೇಷದಿಂದ ಬಂದು ಮೋಹನಲಾಲ ಮಾರವಾಡಿಯವರಲ್ಲಿಳಿದು ಒಂದಕ್ಕೆ ಎರಡು ಮಾಡುವದಾಗಿ ಹೇಳಿ ೮೫ ತೊಲಿ ಬಂಗಾರ ಅಪಹರಿಸಿದ್ದನು. ಕೊಪ್ಪಳ ಸಬ್ ಇನಸ್ಪೆಕ್ಟರರು ಅವನನ್ನು ಅಂದೇ ರಾತ್ರಿ ಗದುಗಿನಲ್ಲಿ ಸೆರೆಹಿಡಿದರು.

ರಾಮದುರ್ಗದ ಸರಾಫ ಶ್ರೀ ಫಕ್ಕೀರಪ್ಪ ಚಾಳಪ್ಪನವರು ರಾಮದುರ್ಗ ಜಿಲ್ಹಾ ಲೋಕಲ್ ಬೋರ್ಡಿನ ಪ್ರಥಮ ಲೋಕನಿಯುಕ್ತ ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು.

ಹೈದರಾಬಾದ ದಿವಾಣರಾದ ಸರ್ ಮಿರ್ಜಾ ಇಸ್ಮಾಯಿಲ್‌ರು ೨೪ ನೇ ತಾರೀಕು ಯಾದಗಿರಿಗೆ ಹೋದಾಗ ಶಂಕರ ಸಂಸ್ಕೃತ ಕಾಲೇಜಿನವರು ಅವರಿಗೆ ಮಾನಪತ್ರವನ್ನು ಕೊಡುವವರಿದ್ದಾರೆ.

ಮಿರಜ (ಹಿರಿಯ) ಯ ರಾಜೇಸಾಹೇಬರು ಬೇಗನೆ ಹೊಸ ಸುಧಾರಣೆಗಳನ್ನು ಘೋಷಿಸಲಿರುವರು. ಹೊಸ ಸುಧಾರಣೆಗಳ ಕರಡು ತಯಾರಾಗಿದ್ದು ರಾಜೇಸಾಹೇಬರು ಆ ಬಗ್ಗೆ ಲೋಕಮತವನ್ನು ತಿಳಿದುಕೊಳ್ಳುತಿರುವರು. ಈ ಹೊಸ ಸುಧಾರಣೆಗಳನ್ವಯ ಮೂರು ಲೋಕನಿಯುಕ್ತ ಮಂತ್ರಿಗಳು ನಿಯಮಿಸಲ್ಪಡುವರೆಂದು ತೋರುತ್ತದೆ. ಕಾರ್ಯಕಾರೀ ಮಂಡಳವನ್ನು ನೇಮಿಸುವದರ ಬದಲು ಅದರ ಆಯ್ಕೆಯಾಗುವದು.

ಶಿವಮೊಗ್ಗೆಯಲ್ಲಿಯ ಅಂಬಾಭವನದ ಒಡೆಯರು ಇಂತಹ ವೇಳೆಯಲ್ಲಿಯೆ ಕಾಫಿ ಮಾರಬೇಕೆಂಬ ಹುಕುಮನ್ನು ಮುರಿದು ಕಾಫಿ ಕೊಟ್ಟದಕ್ಕಾಗಿ ಮ್ಯಾಜಿಸ್ಟ್ರೇಟರು ೩೦ ರೂ. ದಂಡ ವಿಧಿಸಿದರು.

---

# ಹಿಂದುಸ್ತಾನ

## ಮುಂಬಯಿ

ಅಹಮ್ಮದನಗರದಲ್ಲಿ ಮಹಾಪೂರದಿಂದ ತೊಂದರೆಗೀಡಾದ ಸ್ತ್ರೀಯರ ಪರಿಹಾರಕ್ಕೆಂದು ಪ್ರಾಂತದ ನೇಕಾರರೆಲ್ಲ ಒಂದೊಂದು ಸೀರೆಯನ್ನು ಕೊಡಬೇಕೆಂದು ಮುಂಬಯಿ ಪ್ರಾಂತದ ನೇಕಾರ ಸಂಘದ ಅಧ್ಯಕ್ಷರು ಬಿನ್ನವಿಸುತ್ತಾರೆ.

ರತ್ನಾಗಿರಿಯಲ್ಲಿ ಮಾವಿನ ಗಿಡಗಳಿಗೆ ಅನುಕೂಲವಾದ ಹವೆಯಿಲ್ಲದ್ದರಿಂದ ಮಾವಿನ ಸುಗ್ಗಿಯ ಬಗ್ಗೆ ಜನ ನಿರಾಶೆಹೊಂದಿರುತ್ತಾರೆ. ಮಾವಿನ ಗಿಡಗಳಿಗೆ ಹೂ-ಚಿಗರು ಬಹಳ ಕಡಮೆ ಬಿಟ್ಟವೆ.

ರತ್ನಾಗಿರಿ ಜಿಲ್ಹೆಯ ಖೇಡ ತಾಲೂಕಿನಲ್ಲಿ ಡಿಸೆಂಬರ ೧೮ ರಿಂದ ಒಂದು ತಿಂಗಳ ವರೆಗೆ ಗಂಡಾಂತರ ಪರಿಸ್ಥಿತಿಯಿದೆಂದು ಸರಕಾರದವರು ಸಾರಿದ್ದಾರೆ.

ಮುಂಬಯಿಯಲ್ಲಿ ಲಾಠಿ ಮೊದಲಾದ ಆಯುಧಗಳನ್ನು ಹಿಡಿಯುವದು ಆ್ಯಸಿಡ್, ಕಲ್ಲುಗಳನ್ನು ಸಂಗ್ರಹಿಸುವದು ಅಲ್ಲದೆಉಳಿದಆಯುಧಗಳನ್ನು ಹಿಡಿಯುವುದು ಮೊದಲಾದ್ದನ್ನು ಪ್ರತಿಬಂಧಿಸುವ ಹುಕುಮಿನ ಅವಧಿಯನ್ನು ಡಿಸೆಂಬರ ೧೮ ರಿಂದ ಮತ್ತೆ ಒಂದು ತಿಂಗಳ ಬೆಳೆಸಲಾಗಿದೆ.

ಮುಂಬಯಿ ನಗರದಲ್ಲಿ ಈ ವರೆಗೆ ಕೊಡಲಾಗುತಿದ್ದ ಹಾಲಿನ ಹಂಚಿಕೆಯನ್ನು ಮಾರ್ಚ ೧ ರಿಂದ ನಿಲ್ಲಿಸಲಾಗುವದೆಂದು ಪೂರೈಕೆ ಮಂತ್ರಿಗಳು ಸಾರಿರುವರು.

ಮುಂಬಯಿ ಪ್ರಾಂತದಲ್ಲಿ ಮದ್ಯಪಾನ ಪ್ರತಿಬಂಧ ಯೋಜನೆ ಪೂರ್ಣ ಸಿದ್ಧವಾಗಿದು ಬೇಗನೆ ಶಾಸನ ಸಭೆಯಲ್ಲಿ ಅದು ಗೊತ್ತುವಳಿ ರೂಪದಿಂದ ಬರುವದೆಂದು ಅಬಕಾರಿ ಮಂತ್ರಿ ಶ್ರೀ ಎಲ್. ಎಂ. ಪಾಟೀಲರು ಹೇಳಿದರು.

೧೯೪೨ನೇ ಇಸ್ವಿಯ ಚಳವಳಿಯಲ್ಲಿ ಭಾಗವಹಿಸಿದ್ದರಿಂದ ಅಪಾತ್ರತೆಗೊಳಗಾದ ವತನದಾರರ ಅಪಾತ್ರತೆಯನ್ನು ಮುಂಬಯಿ ಸರಕಾರದವರು ದೂರ ಮಾಡಿ ಚಳವಳಿಯಲ್ಲಿ ರಾಜೀನಾಮೆ ಕೊಟ್ಟವರನ್ನು ನೋಕರಿಯಿಂದ ತಿರುಗಿ ತೆಗೆದುಕೊಳ್ಳಲು ಸೌಕರ್ಯ ಒದಗಿಸಿದ್ದಾರೆ. ವತನ ಕಾಯದೆ ಮೇರೆಗೆ ಅಪಾತ್ರರಾದವರನ್ನು ನೇಮಕಕ್ಕೆ ಯೋಗ್ಯರನ್ನಾಗಿ ಗಣಿಸಲಾಗುವದು.

ಮುಂಬಯಿ ಗಿರಣಿ ಕಾಮುಗಾರ ಸಂಘದವರು ಗಿರಣಿಗಳ ಒಡೆಯರು ತಮಗೆ ಕೊಡಬೇಕೆಂದಿರುವ ಎರಡು ತಿಂಗಳ ಬೋನಸನ್ನು ಸ್ವೀಕರಿಸಬಾರದೆಂದು ಗೊತ್ತುವಳಿ ಅಂಗೀಕರಿಸಿದ್ದಾರೆ. ಮೂರು ತಿಂಗಳ ಬೋನಸನ್ನು ಕೊಡಬೇಕೆಂದು ಅವರ ಬೇಡಿಕೆಯಾಗಿದೆ.

ಮುಂಬಯಿ ಹಿಂದೀ ವೃತ್ತಪತ್ರ ಸಹಕಾರಿ ಸಂಘ ಸ್ಥಾಪಿತವಾಗಿದ್ದು ಅಮೃತಲಾಲ ಸೇಟರು ಅದರ ಡಾಯರೆಕ್ಟರ ಮಂಡಳದ ಅಧ್ಯಕ್ಷರಾಗಿರುವರು. ಎಸ್. ಸದಾನಂದ, ಎಸ್. ಆರ್ ದಾತೆ, ಇಂದ್ರವದನ ಠಾಕೂರ, ಕಾಂತಿಲಾಲ ಶಹಾ ಮೊದಲಾದವರು ಡಾಯರೆಕ್ಟರರಿರುವರು.

ಮುಂಬಯಿ ಸರಕಾರದವರು ಪ್ರಾಂತದಲ್ಲಿಯ ದೊಡ್ಡ ಬಂದರಗಳ ಬಗ್ಗೆ ವಿಚಾರಣೆ ನಡೆಸಲು ಎಂ. ಎ. ಮಾಸ್ತರರ ಅಧ್ಯಕ್ಷತೆಯಲ್ಲಿ ಒಂದು ಮಂಡಳ ನೇಮಿಸಿರುವರು. ಇದರಲ್ಲಿ ಶ್ರೀ ಡಿ. ಪಿ. ಕರಮರಕರ, ಕೃಷ್ಣಕುಮಾರ ಕಲ್ಲೂರ, ಎಸ್. ಕೆ. ಕಲ್ಲಾಪೂರ ಮತ್ತು ಮಣಿಕಲಾಲ ಲಲ್ಲೂಭಾಯಿಯವರು ಉಳಿದ ಸದಸ್ಯರಾಗಿರುವರು.

## ಮದ್ರಾಸ

ಕೆಲ ದಿನ ಬಿಸಿಲು ಬಿದ್ದರೂ ಮದರಾಸಿನಲ್ಲಿ ರವಿವಾರದಿಂದ ಮಳೆ ಪ್ರಾರಂಭವಾಗಿದ್ದು ೪-೩೦ ಇಂಚು ಮಳೆ ಒಂದು ದಿನ ಬಿದ್ದಿತು.

೧೯೨೧ರ ಮಾಪಿಳ್ಳಾ ಬಂಡಾಯದ ಸಂಬಂಧದಲ್ಲಿ ಆಕ್ಷೇಪಾರ್ಹ ಲೇಖ ಪ್ರಸಿದ್ಧಿಸಿದ್ದಕ್ಕಾಗಿ ಮದ್ರಾಸ ಸರಕಾರದವರು ದೇಶಾಭಿಮಾನಿಯೆಂಬ ಮಲೆಯಾಳಿ ದೈನಿಕ ಪತ್ರಿಕೆಗೆ ೧೦೦೦ ರೂಪಾಯಿ ಜಾಮೀನ ಬೇಡಿದ್ದಾರೆ.

ಮದ್ರಾಸ ಪ್ರಾಂತದಲ್ಲಿ ಎಲ್ಲ ದೇವಾಲಯಗಳನ್ನು ಹರಿಜನರಿಗೆ ಮುಕ್ತ ಮಾಡುವ ಆವಶ್ಯಕತೆಯನ್ನು ಸರಕಾರಕ್ಕೆ ಬಿಂಬಿಸಲು ಶ್ರೀ ರಾಮುಲು ಅವರು ನವಂಬರ ೨೫ರಿಂದ ಉಪವಾಸ ನಡೆಸಿದ್ದರು. ಸರಕಾರದವರು ಶೀಘ್ರದಲ್ಲಿ ಈ ಬಗ್ಗೆ ಯೋಜನೆ ಕೈಕೊಳ್ಳಲಿರುವದರಿಂದ ಉಪವಾಸ ಬಿಡಬೇಕೆಂದು ಉಪಮಂತ್ರಿ ಬಿ ಎಸ್ ಮೂರ್ತಿಯವರು ಆಶ್ವಾಸನಕೊಟ್ಟದ್ದರಿಂದ ಶ್ರೀ ರಾಮುಲುರವರು ಉಪವಾಸ ಬಿಟ್ಟರು.

## ಹೊಸದಿಲ್ಲಿ

ಡಿಸೆಂಬರ ೧೬ ರಿಂದ ಹಿಂದುಸ್ತಾನ ಅಮೇರಿಕೆಯ ನಡುವೆ ರೇಡಿಯೋ ಟೆಲಿಫೋನ ಸರ್ವಿಸ್ ಪ್ರಾರಂಭವಾಗಿದೆ. ಮೂರು ನಿಮಿಷ ಸಂಭಾಷಣೆಗೆ ೫೦ ರೂಪಾಯಿ ಹಾಗು ಮುಂದಿನ ಪ್ರತಿಯೊಂದು ಮಿನಿಟಿಗೆ ೧೬-೧೧-೦ ಬೀಳುವದು.

ಬ್ರಹ್ಮದೇಶದಿಂದ ೭೯೭೭೮೦ ಟನ್ ಅಕ್ಕಿ ಹಾಗು ೩೬೦೩ ಟನ್ ಭತ್ತ ಮತ್ತು ೪೧೭೮ ಟನ್ ಭತ್ತ ಮತ್ತು ೪೧೭೮ ಟನ್ ಅಕ್ಕಿ ಅನುಕ್ರಮವಾಗಿ ಮದ್ರಾಸ ಮತ್ತು ಕೊಚ್ಚಿ ಬಂದರಕ್ಕೆ ಬಂದಿವೆ.

ಡಾ ರಾಜೇಂದ್ರ ಪ್ರಸಾದರು ಪ್ರತ್ಯೇಕಿಸಲ್ಪಟ್ಟ ಹಾಗು ಗುಡ್ಡಗಾಡು ಭಾಗಗಳ ಪ್ರಜಾ ಸಂಘದ ಕಚೇರಿಯ ಉದ್ಘಾಟನ ಸಮಾರಂಭವನ್ನು ಜರುಗಿಸುತ್ತ ಘಟನಾ ಸಮಿತಿಯು ಅವರನ್ನು ಎತ್ತಿ ಹಿಡಿಯುವದವಶ್ಯವೆಂದು ಹೇಳಿದ್ದಲ್ಲ ಕೆಲ ಪ್ರಾಂತಗಳಲ್ಲಿ ಮುಸಲ್ಮಾನರಿಗಿಂತ ಅವರ ಸಂಖ್ಯೆ ಹೆಚ್ಚಾಗಿದೆಂದು ಹೇಳಿದರು. ಅವರಿಗೆ ಸಲಹೆ ಸಮಿತಿಯಲ್ಲಿ ಪ್ರಾತಿನಿಧ್ಯ ಕೊಡುವದಾಗಿಯೂ ಆಶ್ವಾಸನವಿತ್ತರು.

ಹಿಂದುಸ್ತಾನ ಸರಕಾರ ಪರರಾಷ್ಟ್ರ ಸಂಪರ್ಕ ಶಾಖೆಯನ್ನು ಹಿಂದುಸ್ತಾನ ಆಕಾಶವಾಣಿ ಮತ್ತು ಕೇಬಲ್ ಕಂಪನಿಯವರಿಂದ ಕೊಂಡುಕೊಳ್ಳುವದೆಂದು ಸರಕಾರಿ ಪ್ರಕಟನ ಹೊರಟಿದೆ. ಇದನ್ನೊಂದು ಪ್ರತ್ಯೇಕ ಶಾಖೆಯನ್ನಾಗಿಟ್ಟು ಮೇಲ್ವಿಚಾರಣೆಗಾಗಿ ಒಬ್ಬ ಜನರಲ್ ಮ್ಯಾನೇಜರರನ್ನು ನೇಮಿಸಲಾಗುವದು. ಈಗ ತಂತಿ ಖಾತೆಯಲ್ಲಿ ವಾಯರಲೆಸ್ ಡಾಯರೆಕ್ಟರರಾಗಿರುವ ಎಸ್. ಬ್ಯಾನರ್ಜಿಯವರನ್ನು ಈ ಸ್ಥಳಕ್ಕೆ ಆರಿಸಲಾಗಿದೆ.

ಬ್ರಹ್ಮದೇಶ ಸರಕಾರ ಶೀಘ್ರದಲ್ಲಿಯೆ ಸ್ವತಂತ್ರ ನಾಣ್ಯ ಪದ್ಧತಿಯನ್ನು ಜಾರಿಯಲ್ಲಿ ತರಲಿದೆ. ಈಗ ಅದು ಹಿಂದುಸ್ತಾನದ ನಾಣ್ಯಗಳನ್ನೆ ಬಳಸುತಿರುವದು.

ಸಂಯುಕ್ತ ರಾಷ್ಟ್ರ ಸಭೆಯ ಅಧಿವೇಶನಕ್ಕಾಗಿ ಅಮೇರಿಕೆಗೆ ಹೋಗಿದ್ದ ವಿಜಯಲಕ್ಷ್ಮಿ ಪಂಡಿತರು ೧೫ ನೇ ದಿನಾಂಕ ೧೨-೩೦ ಗಂಟೆಗೆ ವಿಮಾನದಿಂದ ದಿಲ್ಲಿಗೆ ಬಂದರು. ಸರದಾರ ವಲ್ಲಭಭಾಯಿ, ಪಂಡಿತ ಪಂತ, ಸರೋಜಿನಿ ನಾಯಡು, ಶ್ರೀ ರಫಿಅಹಮ್ಮದ ಕಿಡ್ವಾಯಿ, ಹಂಸಾ ಮೇಥಾ, ದಿವಾಣ ಚಮಣಲಾಲ ಮೊದಲಾದವರು ವಿಮಾನಗೃಹಕ್ಕೆ ಹೋಗಿ ಅವರನ್ನು ಸನ್ಮಾನಿಸಿದರು.

ಆಯ. ಸಿ. ಎಸ್. ಮತ್ತು ಆಯ. ಪಿ. ಎಸ್ ನೋಕರರು ಭಾರತ ಮಂತ್ರಿಗಳೊಡನೆ ಮಾಡಿಕೊಂಡ ಕರಾರುಗಳನ್ನು ಬಿಟ್ಟುಗೊಟ್ಟು ಹಿಂದುಸ್ತಾನ ಸರಕಾರದೊಡನೆ ಹೊಸಕರಾರು ಮಾಡಿಕೊಳ್ಳಬೇಕೆಂದು ನಡುಗಾಲ ಸರಕಾರ ತಿಳಿಸಿದೆಂದು ತಿಳಿಯುತ್ತದೆ, ಸಂಬಳ ಸಮಿತಿಯವರನ್ನು ವಿಚಾರಿಸಿ ಈ ನೋಕರರ ಅಂತಿಮ ಸಂಬಳ ೨೦೦೦ ರೂ. ಇರತಕ್ಕದ್ದೆಂದು ನಿಶ್ಚಯಿಸಲಾಗಿದೆಂದೂ ತಿಳಿಯುತ್ತದೆ.

## ಬಂಗಾಲ

ಕಲಕತ್ತೆಯಲ್ಲಿಯ ಇಂಡಿಯಾ ಮ್ಯುಜಿಯಮ ಯುದ್ಧ ಮೂಲಕ ಸಾರ್ವಜನಿಕರಿಗೆ ಮುಚ್ಚಲಾಗಿತ್ತು. ಜಾನೇವಾರಿ ಒಂದರಿಂದ ಅದು ಮತ್ತೆ ಸಾರ್ವಜನಿಕರಿಗೆ ತೆರೆಯಲ್ಪಡುವದು.

ನೌಖಾಲಿ ಜಿಲ್ಹೆಯಲ್ಲಿಯ ಗಾಯಾಳುಗಳನ್ನು ಉಪಚರಿಸಲು ಮುಂಬಯಿ ಡಾಕ್ಟರರ ತಂಡವೊಂದು ಹೋಯಿತು.

ಎಲ್ಲ ಪ್ರಶ್ನೆಗಳು ಗುಂಪುಗಳಲ್ಲಿ ಸಾದಾ ಬಹುಮತದಿಂದ ನಿರ್ಣಯಿಸಲ್ಪಡುವದಾಗಿ ಬ್ರಿಟಿಶ್ ಸರಕಾರದ ಇತ್ತೀಚಿನ ಪ್ರಕಟನೆಯಲ್ಲಿ ವಿವರಿಸಲಾಗಿದೆಯಾದ್ದರಿಂದ ಆಸಾಮ ಸದಸ್ಯರು ಘಟನಾ ಸಮಿತಿಯಲ್ಲಿ ಭಾಗ ವಹಿಸಬೇಕೋ ಬಾರದೊ ಎಂಬ ಬಗ್ಗೆ ಗಾಂಧೀಜಿಯವರ ಸಲಹೆ ಕೋರಲು ಆಸಾಮ ಶಾಸನ ಸಭೆಯ ಕಾಂಗ್ರೆಸ್ ಪಕ್ಷದ ಕಾರ್ಯದರ್ಶಿಗಳಾದ ಮಹೇಂದ್ರ ಮೋಹನ ಚೌಧರಿಯವರು ಶ್ರೀರಾಮಪುರಕ್ಕೆ ಹೋಗಿರುವರು.

ಗುಂಪಿನ ನಿರ್ಣಯಕ್ಕೆ ಆಸಾಮ ಕಾಂಗ್ರೆಸ್ಸು ನಿಷೇಧವನ್ನು ದೃಢಪಡಿಸಿ ಅದು ಸಂಯುಕ್ತ ಕೋರ್ಟಿನ ನಿರ್ಣಯವನ್ನು ನಿರಾಕರಿಸುವದೆಂದೂ ಈ ಸಮಯದಲ್ಲಿ ತಮ್ಮ ಸಹಾಯಕ್ಕೆ ಬರಬೇಕೆಂದೂ, ಆಸಾಮ ಕಾಂಗ್ರೆಸ ಅಧ್ಯಕ್ಷ ಮೌಲಾನಾ ತಯ್ಯಾಬುಲ್ಲಾ ಇವರು ಗಾಂಧೀಜಿಯವರಿಗೆ ಕೇಳಿಕೊಂಡಿದ್ದರು. ಇದಕ್ಕೆ ಗಾಂಧೀಜಿ 'ನಾನು ನಿರೀಕ್ಷಿಸುತಿರುವೆನು' ಎಂದು ತಂತಿಯಿಂದ ಉತ್ತರ ಕೊಟ್ಟಿರುವರು.

ಕಲಕತ್ತೆಯ ಚಾಬಿಜಾರ ಬೀದಿ ಬಳಿಯಲ್ಲಿ ಮೊಹರಮದ ಕೊನೆಯ ದಿನ ನಡೆದ ದುರ್ಘಟನೆಗಳ ಸಂಬಂಧದಲ್ಲಿ ಆ ಭಾಗದ ಮುಸಲ್ಮಾನೇತರರ ಮೇಲೆ ೭೦ ಸಾಪಿರ ರೂ. ಸಾಮೂಹಿಕ ದಂಡ ಹೇರಲಾಗಿದೆ. ಇದರಲ್ಲಿ ವಸುಮತಿ ದೈನಿಕ ಪತ್ರಿಕೆಯ ಮೇಲೆಯೂ ೫೦೦೦ ರೂ. ದಂಡ ಬಿದ್ದಿರುವದು. ಬೇರೆ ಮೂರು ಮುಸಲ್ಮಾನೇತರ ಭಾಗಗಳ ಮೇಲೆ ೪೦೦೦ ರೂ. ಮುಸಲ್ಮಾನರ ಒಂದು ಭಾಗದ ಮೇಲೆ ೨೦೦೦ ರೂ. ದಂಡ ಹೇರಲಾಗಿದೆ.

## ಸರಹದ್ದ—ಪಂಜಾಬ

ಗುಡ್ಡಗಾಡು ಜನರ ಹಾವಳಿಯಿಂದ ನಿರಾಶ್ರಿತರಾದ ಸರಹದ್ದ ಪ್ರಾಂತದ ೧೨೦೦೦ ಜನರು ಕಾಶ್ಮೀರ ಸಂಸ್ಥಾನ ಸೇರಿದ್ದಾರೆ.

ಪಂಜಾಬ ಮುಸ್ಲಿಂಲೀಗ ಕಾರ್ಯಕರ್ತರ ಪರಿಷತ್ತು ಕೂಡಿ ಪ್ರತ್ಯೇಕ ಹೋರಾಟದ ಕಾರ್ಯಕ್ರಮವನ್ನು ತಯಾರಿಸಲು ಪ್ರಾಂತದ ೫ ಭಾಗಗಳ ಒಬ್ಬೊಬ್ಬ ಪ್ರತಿನಿಧಿಯನ್ನೊಳಗೊಂಡ ೫ ಜನರ ಉಪಸಮಿತಿಯನ್ನು ನೇಮಿಸಲಾಯಿತು. ಮುಂದಿನ ಎರಡು ತಿಂಗಳು ಮುಸಲ್ಮಾನರಿಗೆ ನಿರ್ಣಾಯಕವಾದ್ದರಿಂದ ನಿಷ್ಕ್ರಿಯೆ ಹಾಗು ದುಃಖ, ಹೋರಾಟ ಹಾಗು ಗೌರವ ಇವುಗಳಲ್ಲಿ ಒಂದನ್ನು ಆರಿಸಿಕೊಳ್ಳಲು ಸರದಾರ ಶೌಕತ ಹಯಾತಖಾನರು ಸಮಾರೋಪದಲ್ಲಿ ತಿಳಿಸಿದರು.

## ಬಿಹಾರ

ಸುಗ್ಗಿಯೊಳಗಾಗಿ ತಿರುಗಿ ಬರದಿದ್ದ ಗುಳೇಕಾರರ ಹೊಲಗಳಲ್ಲಿ ಸುಗ್ಗಿ ಮಾಡುವದಕ್ಕಾಗಿ ಸರಕಾರದವರು ಹೊರಡಿಸಿದ ಆರ್ಡಿನನ್ಸಿನನ್ವಯ ಅಧಿಕಾರಿಗಳನ್ನು ನೇಮಿಸಿರುವರು. ಅವರು ಈಗಾಗಲೆ ಕಾರ್ಯ ಪ್ರಾರಂಭಿಸಿದ್ದಾರೆ ಬಿಹಾರದಲ್ಲಿ ಅನಾಹುತಕ್ಕೀಡಾದ ಎಲ್ಲ ಜಿಲ್ಹೆಗಳಲ್ಲಿಯೂ ಇದೇ ಕ್ರಮವನ್ನು ಅನುಸರಿಸಲಾಗುವದು.

## ಸಂಯುಕ್ತಪ್ರಾಂತ

ಪಂಡಿತ ಜವಾಹರಲಾಲರು ಬನಾರಸದಿಂದ ೧೬ಕ್ಕೆ ವಿಮಾನದಲ್ಲಿ ಕಲಕತ್ತೆಗೆ ಹೋಟಕೂಡಲೆ ಅವರ ವಿಮಾನಕ್ಕೆ ಬೆಂಕಿ ಹತ್ತಿದ್ದು ಕಂಡುಬಂತು. ಕೂಡಲೆ ವಿಮಾನ ಕೆಳಗಿಳಿದು ಬೆಂಕಿಯನ್ನು ಆರಿಸಲಾಯಿತು. ವಿಮಾನದಲ್ಲಿದ್ದ ಯಾವದೊ ಹಳೆಯ ಎಣ್ಣೆಗೆ ಬೆಂಕಿ ತಗಲಿತ್ತೆಂದು ವೈಮಾನಿಕರು ಹೇಳಿದರು. ಬೆಂಕಿ ನಂದಿಸಿದ ನಂತರ ಅದು ಮತ್ತೆ ಹೊರಟಿತು.

ಪಂಡಿತ ಜವಾಹರಲಾಲರು ಮೃದುಲಾ ಸಾರಾಭಾಯಿಯವರೊಂದಿಗೆ ಕಲಕತ್ತೆಯಿಂದ ಅಲಹಾಬಾದಕ್ಕೆ ಬಂದು ಸರ್ ತೇಜಬಹದ್ದೂರ ಸಪ್ರೂರವರ ನಿವಾಸಕ್ಕೆ ಹೋಗಿ ಅವರೊಂದಿಗೆ ಮಾತುಕತೆ ನಡೆಸಿದರು.

ಗೋರಖಪುರದಲ್ಲಿ ಕೂಡುವ ಹಿಂದೂ ಮಹಾಸಭೆಯ ಅಧ್ಯಕ್ಷಸ್ಥಾನಕ್ಕೆ ಶ್ರೀ ಎಲ್. ಬಿ. ಭೋಪಟಕರರು ಆರಿಸಲ್ಪಟ್ಟಿದ್ದಾರೆ. ಈ ಪರಿಷತ್ತು ಶಾಂತರೀತಿಯಿಂದ ಸಾಗುವಂತೆ ಯುಕ್ತ ಪ್ರಾಂತ ಸರಕಾರದವರು ಅತ್ಯಂತ ದಕ್ಷತೆ ವಹಿಸಿರುವರು.

## ಸಿಂಧ

ಬಿಹಾರದಿಂದ ಬರುವ ಮುಸ್ಲಿಮ ನಿರಾಶ್ರಿತರಿಗೆ ಸಿಂಧದಲ್ಲಿರಲು ಅನುಕೂಲತೆಗಳನ್ನು ಕಲ್ಪಿಸಿ ಕೊಡಲಾಗುವದೆಂದು ಸಿಂಧದ ಶಿಕ್ಷಣ ಮಂತ್ರಿಗಳು ಹೇಳಿದರು.

ಸಿಂಧದಲ್ಲಿ ಹೊಸ ಲೀಗ ಮಂತ್ರಿಮಂಡಳವನ್ನು ಸ್ಥಾಪಿಸುವ ಮೊದಲು ಪ್ರಾಂತಿಕ ಮುಸ್ಲಿಂಲೀಗನ್ನು ಕೇಳಬೇಕೆಂದು ಸಿಂಧ ಲೀಗ ಕಾರ್ಯಕಾರೀ ಮಂಡಳದವರು ಗೊತ್ತುವಳಿ ಪಾಸುಮಾಡಿದ್ದಾರೆ. ಇದೀಗ ಸಿಂಧದಲ್ಲಿ ಸುಭದ್ರ ಮಂತ್ರಿಮಂಡಳ ಸ್ಥಾಪನೆ ಶಕ್ಯವಿದ್ದುದರಿಂದ ಹೊಸ ಮಂತ್ರಿ ಮಂಡಳದವರು ಮುಸಲ್ಮಾನ ಜನಸಾಮಾನ್ಯರ ಉದ್ಧಾರಕ್ಕಾಗಿ ಕಾಯದೆ ಮಾಡಬೇಕೆಂದು ಕೇಳಿಕೊಳ್ಳಲಾಗಿದೆ. ಕ್ರಮಶಃ ಮದ್ಯಪಾನ ಪ್ರತಿಬಂಧ, ಹೂರ ವಸತಿಗಳನ್ನು ರದ್ದುಪಡಿಸುವದು ಮತ್ತು ಬಿಹಾರದಲ್ಲಿಯ ಮುಸಲ್ಮಾನ ಗುಳೇಗಾರರಿಗೆ ಮುಖಿ ಅರಣ್ಯದಲ್ಲಿಯ ೨೦ ಸಾವಿರ ಎಕರೆ ಭೂಮಿಯನ್ನು ಕಾಯ್ದಿಡಬೇಕೆಂದು ಸೂಚಿಸಲಾಗಿದೆ.

೧೯೪೪ ರಲ್ಲಿ ಸಿಂಧ ಅಬ್ಸರ್ವರ ಮತ್ತು ಸಂಸಾರ ಸಮಾಚಾರ ಇವುಗಳಿಗೆ ಅನುಕ್ರಮವಾಗಿ ೨೦೦೦ ರೂ. ಹಾಗು ೧೦೦೦ ರೂ. ಗಳ ಜಾಮೀನು ಬೇಡಿದ್ದನ್ನು ಸಿಂಧ ವರಿಷ್ಠ ನ್ಯಾಯಾಲಯದವರು ರದ್ದುಗೊಳಿಸಿದ್ದಾರೆ.

## ಸಂಸ್ಥಾನಗಳು

ಹೈದ್ರಾಬಾದ ಸಂಸ್ಥಾನದ ಹಲವು ಭಾಗಗಳಲ್ಲಿ ವಿಶೇಷತಃ ನಾಲಗೊಂಡಾ ಜಿಲ್ಹೆಯಲ್ಲಿ ಹಲವು ದಿನಗಳಿಂದ ಕಮ್ಯುನಿಸ್ಟರು ರೈತರಲ್ಲಿ ಸರಕಾರ ವಿರುದ್ಧ ಚಳವಳಿಯನ್ನು ಹಬ್ಬಿಸುತ್ತಿರುವರು. ಇದರಿಂದ ದೇಶಮುಖರ ಮೇಲೆ ಬಹಿಷ್ಕಾರ ಹಾಕಲಾಗಿದ್ದು ಕೆಲ ಕಡೆ ಬಿತ್ತನೆ ಮೊದಲಾದ್ದೂ ನಿಂತುಹೋಗಿದೆ. ಇನ್ನು ಹಲವು ಕಡೆ ಒತ್ತಾಯದಿಂದ ಅದು ಸಾಗಿದೆ. ಸರಕಾರದವರು ಈ ಬಗೆಯ ಚಟುವಟಿಕೆಗಳನ್ನು ಅನಿಯಂತ್ರಿತವಾಗಿ ಸಾಗಗೊಡಲಾರರೆಂದು ಮುಂತಾಗಿ ಪ್ರಕಟನೆ ಹೊರಡಿಸಿದ್ದಾರೆ.

ನಿಜಾಮ ಶಾಸನಸಭೆಯ ಆಯ್ಕೆ ಇದೀಗ ನಡೆದಿದ್ದು ಸಂಸ್ಥಾನ ಕಾಂಗ್ರೆಸ್ಸಿನವರು ಇದರಲ್ಲಿ ಭಾಗ ವಹಿಸಿಲ್ಲ.

ಹೈದ್ರಾಬಾದ ಹೊಸ ರಾಜ್ಯಘಟನೆಯನ್ನು ಪ್ರತಿಭಟಿಸಲು ಔರಂಗಾಬಾದದ ಹಿಂದೂ ಜನ ಹರತಾಳವನ್ನಾಚರಿಸಿದರು.

ರಾ. ಬ. ಸಿ. ಪಿ. ಕರುಣಾಕರ ಮೆನನ್‌ರು ಮುಂದಿನ ಮಾರ್ಚದಿಂದ ಕೊಚೀನ ಸಂಸ್ಥಾನದ ದಿವಾಣರಾಗಿ ನೇಮಕ ಹೊಂದಿದ್ದಾರೆ.

ಬಡೋದೆ ಸರಕಾರದವರು ೬೨೫೭೦೫ ರೂ. ಹೆಚ್ಚಿನ ವೆಚ್ಚ ವಹಿಸಿ ಪ್ರಾಥಮಿಕ ಶಿಕ್ಷಕರಿಗೆ ಹೊಸ ಗ್ರೇಡ ಕೊಟ್ಟಿದ್ದಾರೆ.

ಪಾಟಣ ಸಂಸ್ಥಾನ ಘಟನಾ ಸಮಿತಿಯ ವರದಿಯನ್ನು ಸರಕಾರದವರು ಸ್ವೀಕರಿಸಿರುತ್ತಾರೆ. ಗ್ರಾಮ ಪಂಚಾಯತಿ ಸಂಸ್ಥೆಗಳಿಗೆ ದಿವಾಣಿ ಮತ್ತು ಫೌಜದಾರಿ ಅಧಿಕಾರ ಕೊಡಬೇಕು, ಭಿಕ್ಷುಕ ವೃತ್ತಿಯ ಉಚ್ಚಾಟನೆ, ಜನತೆಗೆ ಸಂಪೂರ್ಣ ನಾಗರಿಕ ಸ್ವಾತಂತ್ರ್ಯ ಕೊಡುವದು ಮೊದಲಾದ ಸೂಚನೆಗಳನ್ನೂ ಈ ಸಮಿತಿಯವರು ಮಾಡಿದ್ದಾರೆ.

## ಚಂದಾದಾರರಲ್ಲಿ ವಿನಂತಿ

ಯಾವದೇ ಪತ್ರವ್ಯವಹಾರ ಮಾಡುವಾಗ್ಗೆ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಮಾಡಲಾಗುವದು. ವ್ಹಿ. ಪಿ. ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ತಿರಸ್ಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ. ಪಿ. ಖರ್ಚು ಮುರಿಯಲಾಗುವದು.

ವ್ಯವಸ್ಥಾಪಕ,



# ಘಟನಾ ಸಭೆಯ ಧ್ಯೇಯ ನಿರೂಪಣೆ ಗೊತ್ತುವಳಿಗೆ ಮಹಾತ್ಮರ ಆಶೀರ್ವಾದ

## ಗುಂಪುಗಳ ವಿಭಜನೆಗೆ ತೀವ್ರವಿರೋಧ

### ಗಾಂಧೀಜಿಯವರ ಶಾಂತಿ ಪ್ರಯತ್ನದ ಮುನ್ನಡೆ

ಪೂರ್ವ ಬಂಗಾಲದಲ್ಲಿ ಮಹಾತ್ಮರು ನಡೆಸಿದ ಹಿಂದುಮುಸಲ್ಮಾನ ಸ್ನೇಹಸಂಪಾದನೆಯ ಪ್ರಯತ್ನ ಅನಿರ್ಬಂಧವಾಗಿ ಸಾಗಿದೆ. ಸಾಯಂ ಪ್ರಾರ್ಥನೆಯ ಕಾಲಕ್ಕೆ ಹಾಡುವ ಗೀತಗಳ ಸಾರವನ್ನೆ ತೆಗೆದುಕೊಂಡು ಅವರು ತಮ್ಮ ಶಾಂತಿ ಸಂದೇಶವನ್ನು ಬೀರುತಿರುವರು. ಪ್ರಾರ್ಥನೆ ಯಾವಾಗಲೂ ಹೃದಯದಿಂದ ಹೊರಹೊಮ್ಮಬೇಕು. ಎಂದರೆ ಪರಮಾತ್ಮನ ಸಾಕ್ಷಾತ್ಕಾರವಾಗುವದೆಂದು ಅವರು ೧೪ ನೇ ತಾರೀಕಿನ ಪ್ರಾರ್ಥನಾ ಸಭೆಯಲ್ಲಿ ಸಂತ ತುಳಸೀದಾಸರಿಗೆ ಪರಮಾತ್ಮನ ಸಾಕ್ಷಾತ್ಕಾರವಾದ ಬಗೆಯನ್ನು ವಿವರಿಸುತ್ತ ಹೇಳಿದರು. ಹೃದಯಾಂತರಾಳದಿಂದ 'ಹೊರಹೊಮ್ಮಿದ ಪ್ರಾರ್ಥನೆ ಕತ್ತಲೆಯಲ್ಲಿದ್ದವರನ್ನು ಬೆಳಕಿಗೆ ತರುತ್ತದೆ. ಭಯಗ್ರಸ್ತರನ್ನು ನಿರ್ಭಯರನ್ನಾಗಿ ಮಾಡುತ್ತದೆ. ಎಂದೂ ಅವರು ಹೇಳಿದರು.

೧೫ ನೇ ತಾರೀಖಿನ ಪ್ರಾರ್ಥನಾ ಪ್ರಾರಂಭವಾದ ಕೂಡಲೆ ಗಾಂಧೀಜಿ ತಮ್ಮ ಮೌನ ವ್ರತವನ್ನು ಪ್ರಾರಂಭಿಸಿದರು. ಈಗೆರಡು ವಾರಗಳಿಂದ ಮಹಾತ್ಮರು ರವಿವಾರ ಸಂಜೆ ಪ್ರಾರ್ಥನಾ ಸಮಯಕ್ಕೆ ಮೌನವ್ರತ ಪ್ರಾರಂಭಿಸಿ ಸೋಮವಾರ ಸಂಜೆ ಪ್ರಾರ್ಥನೆಯ ನಂತರ ಅದನ್ನು ಬಿಟ್ಟುಗೊಡುತ್ತಾರೆ. ಎರಡು ಮೈಲು ದೂರದ ಸೋನಾಪೂರಕ್ಕೆ ಜನರು ರವಿವಾರ ದಿನ ಸಂತೆಗೆ ಹೋಗುವದರಿಂದ ಅಂದು ಪ್ರಾರ್ಥನೆಗೆ ಹೆಚ್ಚು ಜನ ಸೇರುವದಿಲ್ಲಾದ್ದರಿಂದ ಗಾಂಧೀಜಿ ತಮ್ಮ ಮೌನದಿನವನ್ನಿಂದು ಬದಲು ಮಾಡಿರುವರು. ಕರ್ನಲ್ ನಿರಂಜನಸಿಂಗ ಗಿಲ್ಲ ಮತ್ತು ಅವರ ಪರಿವಾರದವರು ಮೊದಲಾದವರು ಇಂದು ಗಾಂಧೀಜಿಯನ್ನು ಕಂಡರು.

ಮಹಾತ್ಮರು ಇದೇ ೨೦ ನೇ ತಾರೀಕಿನಿಂದ ಗ್ರಾಮಸಂಚಾರವನ್ನು ಪಾದಚಾರಿಯಾಗಿ ನಡೆಸಲಿರುವರಷ್ಟೆ. ಆದರೆ ಅವರು ಈಗ ೨೨ ಕ್ಕೆ ಸಮೀಪದ ಒಂದು ಹಳ್ಳಿಯಲ್ಲಿಯ ಸಭೆಗೆ ಹೋಗುವ ಕಾರ್ಯಕ್ರಮವನ್ನಿಟ್ಟುಕೊಂಡಿರುವದರಿಂದ ಮತ್ತು ಆಗ ಒಂದೆರಡು ದಿನ ಅವರು ತಿರುಗಿ ಶ್ರೀರಾಮಪುರಕ್ಕೆ ಬರಲಿರುವದರಿಂದ ಈ ಗ್ರಾಮಸಂಚಾರ ಮುಂದೆ ಬೀಳುವ ಸಂಭವವಿದೆ.

#### ಮಾಧಪುರದಲ್ಲಿ ಆಸ್ಪತ್ರಿ

ಮಹಾತ್ಮರು ಎರಡು ಮೈಲು ಕಾಲಿನಿಂದ ನಡೆದುಹೋಗಿ ಮಾಧುರುರದಲ್ಲಿ ಭಾರತೀಯ ವೈದ್ಯ ಸಂಘದವರು ತೆರೆಯಲಿರುವ ಆಸ್ಪತ್ರಿಯ ಉದ್ಘಾಟನ ಸಮಾರಂಭವನ್ನು ಜರುಗಿಸಿದರು. ಶ್ರೀರಾಮಪುರದಿಂದ ಎರಡು ಮೈಲು ಅವರು ಕಾಲಿನಿಂದಲೆ ನಡೆಯುತ್ತ ಹೋದರು. ಡಾ. ದಾಸಗುಪ್ತರು ಅವರಿಗೆ ಪಲ್ಲಕ್ಕಿಯ ವ್ಯವಸ್ಥೆ ಮಾಡಿದ್ದರು. ಮಹಾತ್ಮರು ಅದರಲ್ಲಿ ಕೂಡಲಿಲ್ಲ. ಪಂಡಿತ ಜವಾಹರಲಾಲರು ಬರುವರೆಂದು ಅಡಿಕೆ ಗಿಡದ ಬೊಡ್ಡೆಗಳನ್ನು ಹಾಕಿ ಸಣ್ಣ ಪೂಲು ಕಟ್ಟಿ ದಾರಿಯಲ್ಲಿ ಬರುವ ಹಳ್ಳವನ್ನು ದಾಟಲು ಅನುಕೂಲ ಮಾಡಿದೆಂದು ದಾಸಗುಪ್ತರು ಹೇಳಿದರು. ಅದಕ್ಕೆ ಗಾಂಧೀಜಿ 'ಪಂಡಿತನು ಬಂದಿಲ್ಲ, ನಾನೇ ಅದನ್ನು ಪಯೋಗಿಸುವ ಪಂಡಿತನಾಗುವೆ' ಎಂದು ಹೇಳಿ ಅಂಕುಡೊಂಕಾದ ಅಲ್ಲಲ್ಲಿ ಬಿದಿರಿನಿಂದ ಪೂಲು ಕಡಿದ ದಾರಿಯಲ್ಲಿ ನಡೆಯಹತ್ತಿದರು. ನಾಲ್ವತ್ತು ನಿಮಿಷಗಳಲ್ಲಿ ಈ ದಾರಿಯನ್ನು ಕ್ರಮಿಸಿ ಗಾಂಧೀಜಿ ಮಾಧಪುರ ಮುಟ್ಟಿದರು. ಸರ್ವರ ಯೋಗಕ್ಷೇಮ ನೋಡಿಕೊಳ್ಳುವ ಪರಮಾತ್ಮನೊಬ್ಬನೆ ಮಹಾವೈದ್ಯನು. ಅವನಲ್ಲಿ ಅಚಲ ವಿಶ್ವಾಸವಿಡುವ ಗತ್ಯವೆಂದು ಗಾಂಧೀಜಿ ಅರ್ಧ ಗಂಟೆ ಭಾಷಣ ಮಾಡಿ ಆಸ್ಪತ್ರಿಯ ಉದ್ಘಾಟನ ಮಾಡಿದರು.

#### ನಿಃಸ್ವಾರ್ಥ ಸೇವಕರ ಅವಶ್ಯಕತೆ

ಶ್ರೀರಾಮಪುರದಲ್ಲಿ ೧೬ನೇ ತಾರೀಖಿನಲ್ಲಿ ಪ್ರಾರ್ಥನಾ ಪೂರ್ವದ ಕಾರ್ಯಕರ್ತರ ಸಭೆಯಲ್ಲಿ ಭಾಷಣ ಮಾಡುತ್ತ ನಿಃಸ್ವಾರ್ಥ ಸೇವೆ ಮಾಡುವ ಗುಣವನ್ನು ಕಲಿಯಲು ಉಪದೇಶಿಸಿದರು. ಗ್ರಾಮಸೇವಕನ ಮುಖ್ಯ ಕರ್ತವ್ಯ ಆತ್ಮಶುದ್ಧಿ ಮಾಡಿಕೊಳ್ಳುವದು. ಇಂದು ನಮ್ಮ ಹಳ್ಳಿಗಳೆಂದರೆ ದೇಹದ ಮೇಲಿರುವ ಕೊಳೆತ ಹುಣ್ಣಿನಂತಿವೆ. ನಮ್ಮ ಎಲ್ಲ ಕೆಡಕುಗಳಿಗೆ ಬ್ರಿಟಿಶರೇ ಕಾರಣರೆಂದು ಅವರನ್ನು ಜರೆಯುತ್ತ ಹೋಗುವದರಲ್ಲಿ ಫಲವಿಲ್ಲ ನಗರಗಳನ್ನು ಹೆಚ್ಚು ಆಕರ್ಷಕ ಮಾಡಿದರೆ ಶ್ರೀಮಂತರು ಅಲ್ಲಿ ಬಂದು ವಾಸಿಸಹತ್ತುವರು. ಇದರಿಂದ ಹಳ್ಳಿಗಳ ಶೋಷಣೆಗೆ ಅವಕಾಶ ಸಿಕ್ಕುವದೆಂದು ಬಗೆದು ಬ್ರಿಟಿಶರು ಮೊದಲು ಪಟ್ಟಣಗಳಲ್ಲಿ ತಳವೂರಿದರು. ಕಷ್ಟಗಳಲ್ಲಿ ಬಿದ್ದ ಹಳ್ಳಿಗರತ್ತ ಲಕ್ಷಿಸಲಿಲ್ಲ. ಈಗ ನಮ್ಮ ಜನರೇ ಆಡಳಿತ ವಹಿಸಿದ್ದರಿಂದ ಈ ಅಪವಾದಕ್ಕೆ ಅವರೂ ಗುರಿಯಾಗಬಾರದು. ಹಳ್ಳಿಗಳ ಉದ್ಧಾರಕ್ಕಾಗಿ ಸರಕಾರ ಪ್ರಯತ್ನಿಸಲಿ. ಸರಕಾರವಷ್ಟೇ ಅಲ್ಲ ಪ್ರತಿಯೊಬ್ಬ ನಾಗರಿಕನೂ ಇದನ್ನು ಮಾಡಬೇಕು. ಕೆರೆ ಹೊಳೆಯ ಹಳಗಳಲ್ಲಿನ ಹೊಲಸನ್ನೆಲ್ಲ ತೆಗೆದು ಹಾಕುವದವಶ್ಯವಾಗಿದೆ. ಅಲ್ಲಿನ ಪುಂಡರು ಸ್ವಾರ್ಥಕ್ಕಾಗಿ ಪರಿಸ್ಥಿತಿಯನ್ನು ಕೆಡಿಸಲು ಹೊಂಚು ಹಾಕಿರುವರು. ಈ ದೇಶ ಮತ್ತು ಮನಗಳಲ್ಲಿ ಹಬ್ಬಿದ ರೋಗಗಳನ್ನು ನಿರ್ಮೂಲನಮಾಡುವ ಕಾರ್ಯಕ್ಕೆ ನಿಃಸ್ವಾರ್ಥ ಸಮಾಜಸೇವಕರು ಟೊಂಕಕಟ್ಟಬೇಕು. ಸರಕಾರದಿಂದಲೇ ಎಷ್ಟೋ ಕಾರ್ಯವಾಗಬಹುದು. ಆದರೆ ಇದಕ್ಕೂ ಸಾರ್ವಜನಿಕರ ಬೆಂಬಲ ಅವಶ್ಯ. ಶಾಂತರೀತಿಯಿಂದ ಸತತ ಪ್ರಯತ್ನ ಮಾಡಹತ್ತಿದರೆ ಈ ಅಜ್ಞಾನ ದುಃಖಗಳನ್ನು ಹಳ್ಳಿಯಿಂದ ಓಡಿಸಬಹುದು. ಪುಂಡರ ಬೇಳೆ ಬೇಯುವ ದಿನಗಳು ಆ ಮೇಲೆ ಉಳಿಯಲಾರವು. ಬಡತನ ಅಜ್ಞಾನ ಹೋದಕೂಡಲೆ ಜಾತೀಯ ಐಕ್ಯ ಸಾಧಿಸುವದು. ಈ ಉದ್ದೇಶದಿಂದಲೆ ನಾನು ನೌಖಾಲಿಗೆ ಬಂದರುವೆನು. ನನ್ನ ಈ ಕಾರ್ಯ ಸಾಧಿಸುವ ವರೆಗೆ ನಾನು ಈ ಸ್ಥಳವನ್ನು ಬಿಟ್ಟು ಕದಲಲಾರೆ. ಈ ಪ್ರಯತ್ನದಲ್ಲಿಯೆ ಪ್ರಾಣಬಿಡಬೇಕಾದರೆ ನಾನು ಅದಕ್ಕೂ ಸಿದ್ಧನಿರುವೆ ಎಂದು ಮುಂತಾಗಿ ಮಹಾತ್ಮರು ಮಾತು ಮುಗಿಸಿದರು.

#### ಜವಾಹರಲಾಲರ ಗೊತ್ತುವಳಿಗೆ ಆಶೀರ್ವಾದ

ಮಹಾತ್ಮರು ೧೭ ನೇ ತಾರೀಕಿನ ಸಾಯಂ ಪ್ರಾರ್ಥನೆಯ ನಂತರ ಮಾಡಿದ ಭಾಷಣದಲ್ಲಿ ಮೊದಲನೆಯ ಸಲವೆ ಘಟನಾ ಸಮಿತಿಯ ಉಲ್ಲೇಖ ಮಾಡಿದರು. ರಾಷ್ಟ್ರದ ಪ್ರತಿಯೊಂದು ಬಿಕ್ಕಟ್ಟಿನ ಮುದ್ದೆಗಳನ್ನು ಸಂಪೂರ್ಣ ವಿಚಾರದಿಂದಲೂ ಎಲ್ಲ ಸಮಾಜಗಳ ನ್ಯಾಯದ ದೃಷ್ಟಿಯಿಂದಲೂ ಪಂಡಿತ ಜವಾಹರಲಾಲರು ಘಟನಾ ಸಮಿತಿಯಲ್ಲಿ ಧ್ಯೇಯ ನಿರೂಪಣೆಗೆ ಸಂಬಂಧಿಸಿದ ತಮ್ಮ ಗೊತ್ತುವಳಿಯನ್ನು ಮಂಡಿಸಿದ್ದು, ಎಷ್ಟೇ ವಿರೋಧ ಬಂದರೂ ಅವರು ಅದಕ್ಕೆ ಬದ್ಧರಾಗುಳಿಯುವರೆಂದು ನನಗೆ ವಿಶ್ವಾಸವಿದೆ. ಪಂಡಿತ ನೆಹರುರವರು ಇತ್ತೀಚೆಗೆ ಲಂಡನ್ನಿಗೆ ಹೋಗಿ ಬಹಳ ಖಿನ್ನರಾಗಿ ಹಿಂತಿರುಗಿರುವರು. ಸತ್ಯ ಹಾಗು ನ್ಯಾಯಗಳ ಕಡೆಗೆ ಪೂರ್ಣ ಲಕ್ಷವಿಟ್ಟು ನಾವು ಯಾವದೇ ನಿರ್ಧಾರಕ್ಕೆ ಬರಬೇಕೆಂದೂ ಎಂಥ ಪ್ರಸಂಗದಲ್ಲಿಯೂ ಅದಕ್ಕೆ ಬದ್ಧರಾಗಬೇಕೆಂದೂ ಇದರಿಂದ ನಾವು ಪಾಠ ಕಲಿಯಬೇಕಾಗಿದೆ ಎಂದೂ ಅವರು ನುಡಿದರು.

#### ಆಸಾಮದ ನಿರ್ಧಾರ ಅಚಲವಾಗಲಿ

ಆಸಾಮದ ಮುಖ್ಯ ಮಂತ್ರಿಗಳಾದ ಬಾರ್ಡೋಲಾಯಿಯವರು ಘಟನಾ ಸಮಿತಿಯ ಗುಂಪುಗಳ ನಿರ್ಮಾಣದ ಬಗ್ಗೆ ಪತ್ರವನ್ನು ಕೊಟ್ಟು ಮಹಾತ್ಮರ ಕಡೆಗೆ ಕಳಿಸಿದ್ದರು. ಆ ಪತ್ರ ತೆಗೆದುಕೊಂಡು ಹೋದ ಮಹೇಂದ್ರ ಮೋಹನ ಚೌಧರಿಯವರು ಆ ಪತ್ರ ಕೊಟ್ಟು ಮಹಾತ್ಮರೊಡನೆ ಆ ಪ್ರಶ್ನೆಯನ್ನು ಚರ್ಚಿಸಿದರು. ಮಹಾತ್ಮರು ನಾಲ್ಕು ಫೂಲ್ಸ್‌ಕ್ಯಾಪ ಕಾಗದದಷ್ಟು ಉತ್ತರ ಕಳಿಸಿದ್ದು ಅದರಲ್ಲಿ ಹೀಗೆ ಬರೆದಿರುವರೆಂದು ಚೌಧರಿಯವರು ಹೇಳುತ್ತಾರೆ. 'ಘಟನಾ ಸಮಿತಿ ಗುಂಪುಗಳಲ್ಲಿ ಒಡೆದು ಹೋಗುವ ಸಮಯ ಬಂದಾಗ ಆಸಾಮವು ಘಟನಾ ಸಮಿತಿಯಿಂದ ಹೊರಬೀಳುವದು ಎಂದು ನೀವು ಹೇಳಬೇಕು. ನಿಮ್ಮ ಮನವೊಲಿಸಿ ನಿಮ್ಮಲ್ಲಿ ಧೈರ್ಯವನ್ನು ತುಂಬುವುದಕ್ಕಾಗಿ ನಾನೀ ಸಮಯವನ್ನೆಲ್ಲ ಉಪಯೋಗಿಸಿದ್ದೇನೆ. ಈಗ ನೀವು ಸರಿಯಾದ ಮಾರ್ಗದಿಂದ ನಡೆದುಕೊಳ್ಳದಿದ್ದರೆ ಆಸಾಮದ ಅವತಾರ ಸಮಾಪ್ತಿಯಾಗುವದು. ನನ್ನ ಮನಸ್ಸಿಗೆ ಯಾವ ಸಮಾಧಾನವೂ ಇಲ್ಲ. ಆಸಾಮ ತನ್ನ ಆತ್ಮವನ್ನು ಕಳೆದುಕೊಳ್ಳಬಾರದು. ಇಡೀ ಜಗತ್ತನ್ನೆದುರಿಸಿ ಅದನ್ನು ಕಾಪಾಡಿಕೊಳ್ಳಬೇಕು ಇಲ್ಲದಿದ್ದರೆ ಆಸಾಮದಲ್ಲಿ ಜನರು ಇಲ್ಲ; ಅದರೆ ಗೊಂಬೆಗಳಿದ್ದಾರೆಂದು ನಾನು ಹೇಳುತ್ತೇನೆ. ಬಂಗಾಲ ಯಾವ ರೀತಿಯಲ್ಲಿಯೆ ಆಗಲಿ ಆಸಾಮದ ಮೇಲೆ ಪ್ರಭುತ್ವ ನಡೆಸಬೇಕೆಂಬ ಸೂಚನೆ ಉದ್ಧಾಮತನದ್ದಾಗಿದೆ' ಎಂದು ಗಾಂಧೀಜಿ ಬರೆದಿರುವರು.

ಚೌಧರಿಯವರು ಅವರೊಂದಿಗಿದ್ದ ಶ್ರೀ ಭಗವತಿಯವರು ಮಹಾತ್ಮರ ಆಶೀರ್ವಾದ ಕೋರಲು ಗಾಂಧೀಜಿ "ದೇವರ ಆಶೀರ್ವಾದದ ಮಾತನ್ನಾಡಿರಿ. ಅದು ಹೆಚ್ಚು ಸಮೃದ್ಧವಾಗಿರುತ್ತದೆ. ನಮ್ಮ ಮನಸ್ಸನ್ನು ತಿರುಗಿಸಲು ಸ್ವತಃ ಮಹಾತ್ಮರು ಪ್ರಯತ್ನಿಸಿದರೂ ನಾವು ಕೇಳುವದಿಲ್ಲ ಎಂದು ಆಸಾಮ ಜನರಿಗೆ ಹೇಳಿರಿ ಎಂದು ಉತ್ತರ ಕೊಟ್ಟರು. ಗುಂಪುಗಳ ನಿರ್ಮಾಣದ ಬಗ್ಗೆ ಮಹಾತ್ಮರು ಎಷ್ಟೊಂದು ವಿರುದ್ಧ ಇರುವರೆಂಬುದು ಇದರಿಂದ ಗೊತ್ತಾಗುವದು.

#### ಶ್ರೀರಾಮಪುರ ದಿಲ್ಲಿ ಸಂಬಂಧ

ಮಹಾತ್ಮರು ಕಳೆದ ವಾರ ದಿಲ್ಲಿಗೆ ಕಳಿಸಬೇಕಾಗಿದ್ದ ಸುದ್ದಿಯನ್ನು ಶ್ರೀರಾಮಪುರದಿಂದ ಕೊಮಿಲ್ಲಾಕ್ಕೆ ಒಯ್ಯಬೇಕಾದರೆ ೧೫೦ ರೂಪಾಯಿಗಳ ವೆಚ್ಚ ತಗಲಿತು. ಕೊಮಿಲ್ಲಾ ದಿಂದ ಆ ಸುದ್ದಿಯನ್ನು ಮುಂದೆ ದಿಲ್ಲಿಗೆ ಕಳಿಸಲಾಯಿತು. ಶ್ರೀರಾಮಪುರ ಕೋಮಿಲ್ಲಾ ಗಳಲ್ಲಿಯ ಅಂತರ ೪೦ ಮೈಲು ಮಾತ್ರ ಇದೆ. ಆ ಸುದ್ದಿಗೊಂದು ತಿದ್ದುಪಡಿಯನ್ನು ಕಳಿಸಬೇಕಾದರೆ ಮಾತ್ರ ೬೦ ರೂ. ಹತ್ತಿದವು. ಶ್ರೀರಾಮಪುರ ದಿಲ್ಲಿ ನಡುವೆ ಈ ರೀತಿ ಸಂಬಂಧವನ್ನಿಟ್ಟುಕೊಳ್ಳಲಾಗಿದೆ. ವಿಶೇಷ ದೂತ ದಿನಾಲು ಬಂದು ಹೋಗುತ್ತಿರುತ್ತಾನೆ. ಮಹಾತ್ಮರು ದೂರಿನ ಆ ಹಳ್ಳಿಯಲ್ಲಿ ಒಬ್ಬಂಟಿಗರಾಗಿರುತ್ತಿದ್ದರು ದಿನಾಲು ನಸುಕಿನ ನಾಲ್ಕು ಗಂಟೆಯಿಂದ ರಾತ್ರಿ ೧೦ ಗಂಟೆ ವರೆಗೆ ಸದಾ ಕಾರ್ಯನಿರತರಾಗಿರುತ್ತಾರೆ. ಇದರ ಹೊರತು ಅವರ ದೈನಂದಿನ ಕಾರ್ಯಕ್ರಮವೂ ನಡೆದಿರುತ್ತದೆ. ಹಿಂದುಸ್ತಾನದ ನಾನಾ ಭಾಗಗಳಿಂದ ದಿನಾಲು ಜನರು ಬಂದು ಮಹಾತ್ಮರನ್ನು ಭೆಟ್ಟಿಯಾಗುತ್ತಾರೆ. ಮಹಾತ್ಮರು ಎಂದೂ ಆಯಾಸಗೊಂಡವರಂತೆ ತೋರುವದಿಲ್ಲ ಸದಾ ನಗೆಮೊಗದಿಂದ ಬಂದವರ ಗೂಡ ಮಾತುಕತೆ ನಡೆಸುತಿರುವರು.

## ಚನ್ನಪಟ್ಟಣದಲ್ಲಿ ಗಲಭೆ

### ಪುಂಡರ ಪುಂಡಾಟಿಕೆ

ಮೈಸೂರು ಸಮೀಪದಲ್ಲಿರುವ ಚನ್ನಪಟ್ಟಣದಲ್ಲಿ ಸೋಮವಾರ ದಿನ ಗಲಭೆ ನಡೆದು ಹೈಸ್ಕೂಲು ಹೆಡ್ ಮಾಸ್ತರ ಮತ್ತು ಬೇರೆ ಮೂವರು ಮರಣ ಹೊಂದಿದ ಸುದ್ದಿ ಬಂದಿದೆ. ಮೈಸೂರು ಕಾಂಗ್ರೆಸ್ ಅಧ್ಯಕ್ಷ ಶ್ರೀ ಕೆ. ಚಂಗಲರಾಯ ರೆಡ್ಡಿಯವರು ಸಹಕಾರಿಗಳ ಸಂಗಡ ಅಲ್ಲಿಗೆ ಹೋದಾಗ ಏಳು ಜತೆ ಎತ್ತು ಕಟ್ಟಿದ ರಥದಲ್ಲಿ ಅವರ ಮೆರವಣಿಗೆ ಹೊರಟಿತು. ಮೆರವಣಿಗೆ ಮುಗಿದ ಬಳಿಕ ರಥವನ್ನು ತಿರುಗಿ ಒಯ್ಯುವ ಕಾಲಕ್ಕೆ ಕಲ್ಲುಗಳು ಬಿದ್ದು ದೊಂಬಿ ಸಂಭವಿಸಿತು. ಅದು ಅಶ್ವತ್ಥನಾರಾಯಣ ಶೆಟ್ಟರ ಮನೆಯ ಹತ್ತರ ಬಂದಾಗ ಎದುರಿಗೆ ಶಸ್ತ್ರಗಳನ್ನು ಧರಿಸಿದ್ದ ಗುಂಪೊಂದು ನಿಂತಿದ್ದು ಕಲ್ಲೆಸೆಯಲು ಪ್ರಾರಂಭಿಸಿತೆಂದೂ ಇದರಿಂದ ವೀರಣ್ಣಗೌಡರ ಕಣ್ಣಬಳಿ ಏಟು ಬಿದ್ದಿತೆಂದೂ ತಿಳಿಯುತ್ತದೆ. ರಥಕ್ಕೆ ಕಟ್ಟಿದ ಎತ್ತುಗಳನ್ನೂ ಗಾಯಗೊಳಿಸಿದರಂತೆ. ಮುಂದೆ ಗರುಡಗಂಭದ ಬಳಿ ಸ್ವಲ್ಪ ಗೊಂದಲವಾಯಿತು ಅಷ್ಟರಲ್ಲಿ ಹಾಯಸ್ಕೂಲ ಹೆಡ್ ಮಾಸ್ತರರ ಕೊಲೆಯ ಸುದ್ದಿ ಹಬ್ಬಿತು. ಮಿಶನ್ ಆಸ್ಪತ್ರಿಯ ಬಳಿ ಹಿಂದೂ ಮುಸಲ್ಮಾನರ ಗುಂಪುಗೂಡಿದವು ಇವೆರಡು ಗುಂಪುಗಳ ಮಧ್ಯದಲ್ಲಿ ಪೋಲೀಸರು ಕಾಂಗ್ರೆಸ ಮುಂದಾಳುಗಳು ಇದ್ದರು. ಚೆಂಗಲರಾಯರೆಡ್ಡಿ ಮತ್ತು ವೀರನಾಯಕರು ಸಮಾಧಾನ ಪಡಿಸುತಿದ್ದರು. ಕಲ್ಲುಗಳು ಪ್ರಾರಂಭವಾದವು. ಪೊಲೀಸ ಅಧಿಕಾರಿಗೆ ಪೆಟ್ಟು ಬಿದ್ದದರಿಂದ ಅವರು ಗುಂಡುಹಾರಿಸಿದರೆಂದು ವರದಿ. ಇದರಿಂದ ಒಬ್ಬ ಸತ್ತು ಅನೇಕರಿಗೆ ಗಾಯಗಳಾದವು. ಇದೇ ರೀತಿ ಕೋಟೆಯಲ್ಲಿಯೂ ದೊಂಬಿಯಾಗಿ ಪೋಲೀಸರು ಗುಂಡು ಹಾರಿಸಿದರೆಂದು ತಿಳಿಯುತ್ತದೆ. ಒಟ್ಟು ಸುಮಾರು ೨೦ ಅಂಗಡಿಗಳ ಲೂಟಿಯಾಗಿದ್ದು ಮೂವರು ಗುಂಡಿನೇಟಿನಿಂದ ಮರಣಹೊಂದಿದವರೆಂದು ತಿಳಿಯುತ್ತದೆ. ಗಾಯಗೊಂಡವರಲ್ಲಿ ಇಬ್ಬರ ಸ್ಥಿತಿ ಚಿಂತಾಜನಕವಿದೆ. ೧೬ ಜನ ಸ್ವಲ್ಪ ಚೇತರಿಸಿಕೊಳ್ಳುತಿರುವರು. ದಿವಾಣರು ಬಂದು ಪರಿಸ್ಥಿತಿಯನ್ನು ನಿರೀಕ್ಷಿಸಿಕೊಂಡು ಹೋದರು. ಆರೋಗ್ಯ ಸಚಿವ ಡಾ, ರಾಯನ್‌ರು ಆಸ್ಪತ್ರೆಯನ್ನು ಸಂದರ್ಶಿಸಿಕೊಂಡು ಹೋದರು. ಚನ್ನಪಟ್ಟಣ ಕ್ಲೋಸಪೇಟೆ ಕಾನಕಾನಹಳ್ಳಿಯಲ್ಲಿ ೧೪೪ ನೇ ಕಲಮು ಜಾರಿ ಮಾಡಲಾಗಿದೆ.

ಮೈಸೂರು ಕಾಂಗ್ರೆಸ ಅಧ್ಯಕ್ಷ ಚಂಗಲರಾಯರೆಡ್ಡಿಯವರು ದೊಂಬಿಯ ಬಗ್ಗೆ ಪ್ರಕಟನೆಯೊಂದನ್ನು ಹೊರಡಿಸಿ ವಿಷಾದ ಪ್ರದರ್ಶಿಸಿದ್ದಲ್ಲದೆ ಕಾಂಗ್ರೆಸ್ಸಿನವರು ಸಂಸ್ಥಾನದ ಎಲ್ಲ ಪ್ರಜೆಗಳ ಹಿತದ ಸಲುವಾಗಿ ಜವಾಬ್ದಾರ ರಾಜ್ಯದ ಚಳವಳಿ ನಡೆಸಿದ್ದು ಮುಸಲ್ಮಾನರು ಈ ಅಂಶ ತಿಳಿಯತಕ್ಕದ್ದೆಂದು ಬಿನ್ನವಿಸಿರುವರು ಈ ಪ್ರಶ್ನೆಯನ್ನು ಹಿಂದೂಡಬಯಸುತಿರುವ ಸರಕಾರದ ಕೃತಿಯನ್ನು ಅಧ್ಯಕ್ಷರು ನಿಷೇಧಿಸಿ ಎಷ್ಟೇ ಎಡರುಗಳು ಬಂದರೂ ಕಾಂಗ್ರೆಸ್ಸು ತನ್ನ ಧ್ಯೇಯದತ್ತ ಸಾಗುವದೆಂದು ಅಭಿಪ್ರಾಯಪಟ್ಟಿರುವರು.

# ಹೊಣೆಗಾರ ಸರಕಾರದ ಪ್ರಶ್ನೆ ಎತ್ತುವದು ಸರಿಯೆ?

## ಮೈಸೂರು ವಿಧಾಯಕ ಸಭೆಯಲ್ಲಿ ಚರ್ಚೆ

### ಪಾನ ನಿರೋಧ ಗೊತ್ತುವಳಿಯ ಸ್ವೀಕಾರ

ಮೈಸೂರು ವಿಧಾಯಕ ಸಭೆಯಲ್ಲಿ ಈ ಬಾರಿ ಹಲವು ಮಹತ್ವದ ಪ್ರಶ್ನೆಗಳು ಚರ್ಚೆಗೆ ಬಂದ ಅಧ್ಯಕ್ಷರ ನಿರ್ಣಯ ಕಾದಿಡಲಾಯಿತು. ತಾತ್ಕಾಲಿಕ ದಿವಾಣರಾದ ಡಾ. ೧೨ಯನ್ನರು ತಾವು ದಿವಾಣರಾಗಿರುವಷ್ಟು ಕಾಲ ಸಭೆಯ ಸದಸ್ಯರಾಗಿರುವದು ಸರಿಯಲ್ಲ ಎಂಬ ಬಗ್ಗೆ ಮತ್ತು ವಿಧಾಯಕ ಸಭೆಯಲ್ಲಿ ಹೊಣೆಗಾರ ಸರಕಾರದ ಪ್ರಶ್ನೆ ಎತ್ತುವದು ಕ್ರಮಬದ್ಧವೇ ಎಂಬವುಗಳು ಮಹತ್ವದ ಪ್ರಶ್ನೆಗಳಾಗಿದ್ದವು.

#### ಸಾಲದ ಔಚಿತ್ಯ

ತಾ ೧೧ ಕ್ಕೆ ಸಭೆಯಲ್ಲಿ ಕಾಂಗ್ರೆಸ್ ಪಕ್ಷದವರು ಈಚೆಗೆ ಸರಕಾರ ಎತ್ತಿದ ೩ ದರ ಬಡ್ಡಿಯ ೫ ಕೋಟಿ ರೂಪಾಯಿ ಸಾಲದ ಔಚಿತ್ಯವನ್ನು ಶಂಕಿಸಿ ಒಂದು ನಿಲುವಳಿ ಸೂಚನೆಯನ್ನು ತಂದಿದ್ದರು ಕಾಂಗ್ರೆಸ್ ಪಕ್ಷದ ಶ್ರೀ ರುದ್ರಪ್ಪ, ಶ್ರೀ ಮಾದಯ್ಯ ಮೊದಲಾದವರು ಬಡ್ಡಿ ಹೆಚ್ಚಾಯಿತು, ಮತ್ತು ಸಾಲಕ್ಕೆ ಬಂದ ಬೇಡಿಕೆ ಹೆಚ್ಚಾಗಿ ಮೈಸೂರಿಂದ ಹೊರಗಿನಿಂದ ಎಂಬೀ ಕಾರಣದಿಂದ ಇದರಿಂದ ಮೈಸೂರು ಪ್ರಜೆಗಳಿಗೆ ಲಾಭವಾಗಲಿಲ್ಲ. ಇತ್ಯಾದಿಯಾಗಿ ವಾದಿಸಿದರು. ೫ ಕೋಟಿ ರೂಪಾಯಿ ಸಾಲ ಹೊರಡಿಸಿದ್ದಕ್ಕೆ ೪೩ಕೋಟಿಗಳಷ್ಟು ವರ್ಗಣಿ ಬಂದು ಸೇರಿದ್ದು ಮೈಸೂರು ಸರಕಾರದಪತ್ತನ್ನು ಸೂಚಿಸುತ್ತದೆ. ಇತ್ಯಾದಿಯಾಗಿ ಸರಕಾರದ ಮತ್ತು ಸ್ವತಂತ್ರ ಸದಸ್ಯರು ವಾದಿಸಿದರು. ನಿಲುವಳಿಗೆ ಬೆಂಬಲ ದೊರೆಯದೆ ಅದು ಬಿದ್ದು ಹೋಯಿತು.

ತಾ ೧೧ಕ್ಕೆ ಸರಕಾರದಳ ಮಸೂದೆಗಳು ವಿಶೇಷ ಚರ್ಚೆಯಿಲ್ಲದೆ ಅಂಗೀಕರಿಸಲ್ಪಟ್ಟವು. ಅವೆಂದರೆ ಮೈಸೂರು ಪಾವರ ಮತ್ತು ಅಲ್ಕೊಹಾಲ ತಿದ್ದುಪಡಿ ಮಸೂದೆ, ಯುದ್ಧ ಪರಿಸ್ಥಿತಿ ಸಂಬಂಧಿ ಲಿಮಿಟೇಶನ್ (ಸಾಲದ ಅವಧಿ ಬಾಧಕ) ಮಸೂದೆ, ವಿಮಾನ ದಾಳಿ ಎಚ್ಚರಿಕೆ ತಿದ್ದುಪಡಿ ಮಸೂದೆ ಮತ್ತು ಮೈಸೂರು ಮೋಟಾರ ವಾಹನ ಮತ್ತು ರಸ್ತೆ ಸಂಚಾರ ತಿದ್ದುಪಡಿ ಮಸೂದೆ. ಹೊಣೆಗಾರ ಸರಕಾರದ ಬಗ್ಗೆ ಸರಕಾರ ವಹಿಸಿದ ಧೋರಣೆಯನ್ನು ಪ್ರತಿಭಟಿಸುವ ಸಲುವಾಗಿ ಕಾಂಗ್ರೆಸ್ ಸದಸ್ಯರು ಇವುಗಳ ಚರ್ಚೆಯಲ್ಲಿ ಭಾಗ ವಹಿಸದೆ ಸಭಾತ್ಯಾಗ ಮಾಡಿದ್ದರು.

#### ಪುನಃ ಘಟನಾ ಸಮಿತಿ ಪ್ರಾತಿನಿಧ್ಯ

ಘಟನಾ ಸಮಿತಿಗೆ ಮೈಸೂರಿನಿಂದ ಲೋಕನಿಯುಕ್ತ ಪ್ರತಿನಿಧಿಗಳನ್ನು ಇನ್ನೂ ಆರಿಸಿ ಕಳಿಸದಿದ್ದುದನ್ನು ಚರ್ಚಿಸಲು ಕಾಂಗ್ರೆಸ್ ಪಕ್ಷದವರು ತಂದ ನಿಲುವಳಿ ಸೂಚನೆಗೆ ಸರಕಾರದ ವಿರೋಧವಿದ್ದರೂ ಅಧ್ಯಕ್ಷರ ಅನುಮತಿ ದೊರೆಯಿತು. ನಿಲುವಳಿಯ ಸಮರ್ಥಕರು ಘಟನಾ ಸಮಿತಿಯಲ್ಲಿ ಮೈಸೂರು ಪ್ರತಿನಿಧಿಗಳು ಮೊದಲಿಂದ ಭಾಗ ವಹಿಸಿ ಘಟನೆಯನ್ನು ರೂಪಿಸುವಲ್ಲಿ ತಮ್ಮ ಭೂಮಿಕೆಯನ್ನು ಆಡಿ ತೋರಿಸಬೇಕಾಗಿತ್ತೆಂದು ವಾದಿಸಿದರು. ಸೂಚನೆಗೆ ಸರಕಾರಿ ಸದಸ್ಯರಲ್ಲದೆ ಶ್ರೀ ದೇವರಾವ ಶಿವರಾಂ, ಧರ್ಮಪ್ರಕಾಶ ವೆಂಕಾಜಿರಾವ್. ಪ್ರಜಾ ಪಕ್ಷದ ಶ್ರೀ ಗುರುವಾರೆಡ್ಡಿ ಮೊದಲವರಿಂದಲೂ ವಿರೋಧ ಬಂತು. ಈಗಲೆ ಭಾಗ ವಹಿಸಲು ಬರುವದಿಲ್ಲವೆಂದೂ ಸಂಧಾನ ಸಮಿತಿಯ ಮೂಲಕವೇ ವಿಚಾರ ನಡೆದು ಕೊನೆಗೆ ಪ್ರತಿನಿಧಿಗಳನ್ನು ಕಳಿಸಲಾಗುವದೆಂದೂ ಇಂಥ ಸಂದರ್ಭದಲ್ಲಿ ಸರ್ ಆರ್ಕಾಟ್ ರಾಮಸ್ವಾಮಿ ದಿವಾಣರಾಗಿ ಲಭಿಸಿದ್ದು ಮೈಸೂರಿನ ಸುದೈವವೆಂದೂ ಸರಕಾರದ ಪ್ರಧಾನ ಕಾರ್ಯದರ್ಶಿಗಳು ಹೇಳಿದರು. ನಿಲುವಳಿ ಬಿದ್ದು ಹೋಯಿತು.

#### ಪುರವಣಿ ಬೇಡಿಕೆಗಳು

ತಾ. ೧೨ಕ್ಕೆ ಸರಕಾರದವರು ೧೯೪೬—೪೭ನೇ ವರ್ಷಕ್ಕೆ ಪುರವಣಿ ಬೇಡಿಕೆಗಳನ್ನು ಮುಂದಿಟ್ಟಾಗ ಸಾಮಾನ್ಯ ಆಡಳಿತೆಯ ಬಗ್ಗೆ ತರಲಾಗಿದ್ದ ೧೨೬೪೫೦ ರೂಪಾಯಿ ಪುರವಣಿ ಬೇಡಿಕೆಯ ಮೇಲಿನ ಕಡಿತ ಸೂಚನೆಗಳಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ದಿವಾಣರು ಅಪ್ಪಣೆಯನ್ನು ನಿರಾಕರಿಸಿದ್ದಾರೆಂದು ತಿಳಿಸಲಾಯಿತು. ಇದರಿಂದ ಕಾಂಗ್ರೆಸ ಮತ್ತು ಇತರ ಲೋಕನಿಯುಕ್ತ ಸದಸ್ಯರು ಬೇಡಿಕೆಯನ್ನು ವಿರೋಧಿಸಿದರೂ ಅದು ೩೪ ವಿರುದ್ಧ ೨೧ ಮತಗಳಿಂದ ಸ್ವೀಕರಿಸಲ್ಪಟ್ಟಿತು. ವಿದ್ಯಾಭ್ಯಾಸದ ಬಗ್ಗೆ ತರಲ್ಪಟ್ಟ ಪುರವಣಿ ಬೇಡಿಕೆಯ ಚರ್ಚೆಯ ಸಮಯ ಶ್ರೀ ಕಡಿದಾಳ ಮಂಜಪ್ಪನವರು ಸಂಸ್ಥಾನಾದ್ಯಂತವೂ ಒತ್ತಾಯದ ಪ್ರಾಥಮಿಕ ಶಿಕ್ಷಣವನ್ನು ಜಾರಿಯಲ್ಲಿ ತರುವ ಅವಶ್ಯಕತೆಯನ್ನು ಸೂಚಿಸಿ ಕಡಿತ ಸೂಚನೆ ತಂದರು. ಈ ಪ್ರಶ್ನೆ ಸರಕಾರದ ಪರಿಶೀಲನೆಯಲ್ಲಿದೆಯೆಂದು ಉತ್ತರ ಬಂದದ್ದರಿಂದ ಕಡಿತವನ್ನು ಹಿಂತೆಗೆದುಕೊಳ್ಳಲಾಯಿತು. ಇದರ ಚರ್ಚೆಯ ಕಾಲಕ್ಕೆ ಬ್ರಾಹ್ಮಣೇತರ ಶಿಕ್ಷಣ, ಬ್ರಾಹ್ಮಣರಿಗೆ ಮಾತ್ರ ವೇದಾಧ್ಯಯನಾಕಾರ, ಬ್ರಾಹ್ಮಣ ವಿದ್ಯಾರ್ಥಿಗಳಿಗೆ ಧರ್ಮ ಭೋಜನ ಮೊದಲಾದ ವಿಷಯಗಳ ಮೇಲೆ ಟೀಕಾಸ್ತ್ರಗಳು ಎಸೆಯಲ್ಪಟ್ಟವು.

#### ವಿಧಿಬಿಂದು

ಆರ್ಥಿಕ ಸಮ್ಮೇಲನದ ಬೇಡಿಕೆಯನ್ನು ಕಾಂಗ್ರೆಸ ಪಕ್ಷದವರು ವಿರೋಧಿಸುತ್ತ ಹೊಣೆಗಾರ ಸರಕಾರವಿಲ್ಲದೆ ಆರ್ಥಿಕ ಪುನರ್ರಚನೆ ಯಶಸ್ವಿಯಾಗದೆಂದು ಹೇಳಿದಾಗ ನಾಮಕರಣ ಸದಸ್ಯರಾದ ಪಿ. ಮಹದೇವಯ್ಯನವರು ವಿಧಿಬಿಂದುವನ್ನೆತ್ತಿ ಈ ಸಭೆಯಲ್ಲಿ ಹೊಣೆಗಾರ ಸರಕಾರದ ಪ್ರಶ್ನೆಯನ್ನೆತ್ತುವದು ನಿಯಮ ವಿರುದ್ಧವಾದುದೆಂದು ಹೇಳಿದ್ದನ್ನು ಕೂಡಲೆ ಸರಕಾರಿ ಸದಸ್ಯರು ಎತ್ತಿಹಿಡಿದು ಆ ಬಗ್ಗೆ ಚರ್ಚೆಯಾಗಬೇಕೆಂದು ಕೇಳಿಕೊಂಡರು. ಅದರ ಬಗ್ಗೆ ಸೋಮವಾರ ತಾ. ೧೬ಕ್ಕೆ ವಿಸ್ತೃತ ಚರ್ಚೆಯಾಯಿತು. ಎಲ್ಲ ವಿಷಯಗಳಲ್ಲಿಯೂ ಕೆಲ ಸದಸ್ಯರು ಸಂದರ್ಭಾಸಂದರ್ಭವನ್ನು ಗಮನಿಸದೆ ಹೊಣೆಗಾರ ಸರಕಾರದ ಪಲ್ಲವಿಯನ್ನು ಹಾಡುತಿದ್ದಾರೆ. ಇದು ಶಾಸನ ನಿಯಮಕ್ಕೆ ವ್ಯತಿರಿಕ್ತವಾದುದೆಂದು ವಾದಿಸಲಾಯಿತು. ಕಾಂಗ್ರೆಸ ಸದಸ್ಯರಲ್ಲದೆ ಧ. ಪ್ರ. ವೆಂಕಾಜಿರಾಯರೇ ಮೊದಲಾದವರು ವಿಧಿಬಿಂದುವನ್ನು ವಿರೋಧಿಸಿ ಹಿಂದೆ ಇಂಥ ಮುದ್ದೆಯನ್ನೆತ್ತಲು ಅವಕಾಶವಿದ್ದುದನ್ನು ಎತ್ತಿ ತೋರಿದರು. ಅಧ್ಯಕ್ಷರಿನ್ನೂ ನಿರ್ಣಯಕೊಟ್ಟಿಲ್ಲ.

#### ಪಾನನಿರೋಧ

ತಾ. ೧೩ ಕ್ಕೆ ಸಂಸ್ಥಾನಾದ್ಯಂತವೂ ಪಾನನಿರೋಧ ಜಾರಿಗೆ ತರಬೇಕೆಂಬ ಗೊತ್ತುವಳಿ ಸ್ವೀಕೃತವಾಯಿತು. ಸರಕಾರದ ಪರವಾಗಿ ಉತ್ತರವಿತ್ತ ಕಂದಾಯಕಾರ್ಯದರ್ಶಿ ಶ್ರೀ ಮಲ್ಲಾರಾಧ್ಯರು ಈ ವಿಷಯ ಸರಕಾರಕ್ಕಿರುವ ಸಹಾನುಭೂತಿಯನ್ನು ಒತ್ತಿ ಹೇಳಿದರು.

ಸಂಸ್ಥಾನದಲ್ಲಿ ಬ್ಯಾಂಕಿಗ್ ಪದ್ಧತಿಯನ್ನು ರಾಷ್ಟ್ರೀಕರಿಸಬೇಕೆಂಬ ಗೊತ್ತುವಳಿ ಬಿದ್ದು ಹೋಯಿತು.

ತಾ. ೧೬ಕ್ಕೆ ಪ್ರಾಥಮಿಕ ಶಾಲಾಧ್ಯಾಪಕರ ಸಂಬಳ ಕನಿಷ್ಠ ೩೦ ರೂಪಾಯಿಗಳಷ್ಟಾದರೂ ಇರಬೇಕೆಂಬ, ಸರಕಾರಿ ಜವಾನರೇ ಮೊದಲಾದ ಕೆಳ ನೌಕರರಿಗೂ ಕನಿಷ್ಠ ೩೦ ರೂ. ಸಂಬಳ ಇರಬೇಕೆಂಬ ಹಾಗು ಹೈಸ್ಕೂಲು, ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಸೈನಿಕ ಶಿಕ್ಷಣ ಕೊಡಬೇಕೆಂಬ ಗೊತ್ತುವಳಿಗಳು ಸ್ವೀಕರಿಸಲ್ಪಟ್ಟವು.

ಜಿಲ್ಹಾ ಬೋರ್ಡು, ನಗರಸಭೆಗಳ ಅಧ್ಯಕ್ಷತೆಯನ್ನು ಒಬ್ಬರೇ ಎರಡು ಬಾರಿಗಿಂತ ಹೆಚ್ಚು ಸಲ ಪಡೆಯ ಬಾರದೆಂಬ ಸರಕಾರಿ ಆಜ್ಞೆಯನ್ನು ಕಿತ್ತುಹಾಕಬೇಕೆಂಬ ಶ್ರೀ ಗ. ರುದ್ರಾರೆಡ್ಡಿಯವರ ಗೊತ್ತುವಳಿ ಕಾಂಗ್ರೆಸ-ಸರಕಾರಿ ಜತೆ ವಿರೋಧವಿದ್ದದ್ದರಿಂದ ಹಿಂತೆಗೆದುಕೊಳ್ಳಲ್ಪಟ್ಟಿತು.




## ಮುಂಬಯಿ ಶೇರ ಪೇಟೆ

ತಾ. ೧೫

ಮುಂಬಯಿ ಸ್ಟಾಕ ಪೇಟೆಯಲ್ಲಿ ಈಗ ಕೆಲ ದಿನಗಳಿಂದ ಬಹಳ ಇಳಿತಾಯ ಕಂಡು ಬರುತಿದೆ. ಕ್ರಿಸ್ಮಸ್ ರಜಾ ದಿನಗಳ ನಿಮಿತ್ತ, ರಾಜಕೀಯ ಪರಿಸ್ಥಿತಿಯ ಅನಿಶ್ಚಿತತೆ ಮತ್ತು ಸರಕಾರಿ ಸಾಲ ಪತ್ರಗಳಿಗೆ ಗಿರಾಕಿಗಳಿಲ್ಲದಿರುವದು ಮೊದಲಾದ ಕಾರಣಗಳಿಂದ ಮಾರುವವರ ಒತ್ತಡವೇ ಹೆಚ್ಚಾಗಿ ತೋರುತಿದೆ. ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೨೬೭೧-೦-೦ ಯಿಂದ ೨೬೭೧-೪-೦ ಕ್ಕಿಳಿದು ಹೋಗಿ ಬಂದು ನೂರು ರೂಪಾಯಿ ಕಳೆದುಕೊಂಡವು. ಬಾಂಬೆ ಡಾಯಿಂಗ ೨೬೩೭-೦-೦ ರಿಂದ ೨೫೬೨-೮-೦ಕ್ಕೂ ಫಿನ್ಲೆ ೩೭೭-೦-೦ರಿಂದ ೩೫೮-೦-೦ಕ್ಕೂ ಕೋಹಿನೂರು ೮೭೭-೦-೦ರಿಂದ ೮೪೪-೦-೦ ಕ್ಕೂ ಸ್ವದೇಶಿ ೭೦೭-೦-೦ ರಿಂದ ೬೮೨-೦-೦ ಕ್ಕೂ ಗೋಕಾಕ ೩೬೪-೦-೦ ರಿಂದ ೩೪೬-೮-೦ ಕ್ಕೂ ಇಳಿದವು. ಸಿಂಧ್ಯ ಸ್ಟೀಮ ೪೬-೪-೦ ರಿಂದ ೪೫-೪-೦ ಕ್ಕೂ ಅಸೋಸಿಯೇಟೆಡ ಸಿಮೆಂಟ್ಸ ೨೩೦-೮-ರಿಂದ ೨೨೬-೦-೦ಕ್ಕೂ ಹೋದವು. ಸರಕಾರಿ ಸಾಲ ಪತ್ರಗಳಿಗೆ ಬೇಡಿಕೆಯಿಲ್ಲದ್ದು ನೋಡಿ ಅನೇಕ ಬ್ಯಾಂಕುಗಳು ತಮ್ಮ ಹಿಡುವಳಿಗಳನ್ನು ಪೇಟೆಗೆ ತಂದದ್ದರಿಂದ ಬ್ಯಾಂಕ ಪಾಲುಗಳೂ ಇಳಿದವು. ಸೆಂಟ್ರಲ ಬ್ಯಾಂಕು ೧೨೦-೦-೦ರಿಂದ ೧೧೫-೮-೦ ಕ್ಕೂ ರಿಝರ್ವ ೧೫೦-೦-೦ರಿಂದ ೧೪೪—೮—೦ಕ್ಕೂ ಇಳಿದರೆ ಇಂಪೀರಿಯಲ್ ಎಸ್. ಸಿ. ಮಾತ್ರ ೨೭೦೫-೦-೦ ರಿಂದ ೨೭೦೦-೦-೦ ಕ್ಕಿಳಿದರೂ ೨೭೧೨-೦-೦ಕ್ಕೆ ಸುಧಾರಿಸಿದವು, ಸರಕಾರಿ ಸಾಲ ಪತ್ರಗಳಲ್ಲಿ ಜಿ.ಪಿ ೧೦೩-೫-೬ ರಿಂದ ೧೦೩-೨-೦ ಕ್ಕೂ ೩॥ ದರದ ೧೯೪೭-೫೦ ಸಾಲ ೧೦೧-೧೪೦-೦ರಲ್ಲಿಯೂ ಇವೆ.

### ಚಿನ್ನ ಬೆಳ್ಳಿ

ಹೊರಗಿನಿಂದ ಚಿನ್ನ ಬೆಳ್ಳಿಗಳು ಬಂದು ಸೇರಿದಂತೆ ತಯಾರಿ ಮತ್ತು ವಾಯದಾ ಬೆಲೆಗಳಲ್ಲಿದ್ದ ಹೆಚ್ಚು ಕಡಿಮೆ ಕಡಿಮೆಯಾಗುತ್ತ ಬಂದಿದೆ. ತಯಾರಿ ಚಿನ್ನ ೧೦೧-೦-೦ದ ವರೆಗೂ ಹೋಗಿದ್ದುದು ೯೯-೦-೦ಕ್ಕೆ ಬಂದಿದೆ. ಪೌಷವಾಯಿದಾ ೯೪-೯-೦ ತಯಾರಿ ಬೆಳ್ಳಿ ೧೪೩—೦—೦ರಿಂದ ೧೪೦—೧೨—೦ ಕ್ಕೂ ಜನವರಿ ವಾಯದಾ ೧೩೪—೦—೦ ರಿಂದ ೧೩೬—೧೦—೦ ಮಾರ್ಚ ವಾಯಿದಾ ೧೨೯—೦—೦ರಿಂದ ೧೩೦—೮—೦ ಕ್ಕೂ ಸ್ಥಿತ್ಯಂತರ ಹೊಂದಿದವು. ಸಾವರೀನ ೬೪—೪—೦

### ಅರಳೆ

ಸರಕಾರದವರು ಅರಳೆ ಪರಮಾವಧಿ ಧಾರಣೆಯನ್ನು ಏರಿಸುವರೆಂದು ಕೆಲವರೂ ಇಲ್ಲವೆಂದು ಉಳಿದವರೂ ಭಾವಿಸುತಿರುವದರಿಂದ ಅರಳೆ ಧಾರಣೆಗಳು ವಿಶೇಷ ಸ್ಥಿತ್ಯಂತರಹೊಂದದೆ ಕೆಲ ರೂಪಾಯಿಗಳಲ್ಲಿ ಚಲಿಸುತ್ತಿವೆ. ಹೊಸ ಜನೆವರಿ ವಾಯದೆ ೪೭೦—೮—೦ ರ ವರೆಗೇರಿ ಮತ್ತೆ ೪೬೬—೧೪—೦ ಕ್ಕೆ ಬಂತು. ಮಾರ್ಚ ೪೭೮-೮-೦ ಮೇ ೪೮೭—೮—೦ ಜುಲೈ ೪೯೭—೧೨—೦ ಸಪ್ಟೆಂಬರ ೫೦೫—೪—೦ ರಲ್ಲಿವೆ.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೦೩-೦-೦ |
| ಅಗಸಿ | ೨೩-೮-೦ |
| ಅಗಸಿ ಎಣ್ಣೆ | ೧೬-೦-೦ |

### ಶಿವಮೊಗ್ಗೆ

| | | |
|---|---|---|
| ಅಡಿಕೆ ದೇಶಾವರ ನಂ ೧ಮಣ ೧ಕ್ಕೆ | | ೩೯-೪೦ |
| ,, ,, | ೨ | ೩೭-೩೮ |
| ರಾಜಾ ಅಲವು | | ೩೬ ೩೭॥ |
| ನುಲಿ | | ೩೭-೩೯ |
| ಚಿಟ್ಟ ವಂತಿ | | ೨೭-೨೮॥ |
| ಬೆಟ್ಟ ರಾಶಿ | | ೨೬-೨೭ |
| ಮೆಣಸು | | ೨೫-೨೬ |

ಪೇಟೆಯಲ್ಲಿ ಸಂಗ್ರಹ ಕಡಿಮೆಯಾಗಿ ಬೇಡಿಕೆ ಹೆಚ್ಚಾಗಿದೆ.

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ ರೂ. | | ೧೨೫ |
| ಅರಿಷಣ ಹೇರು | | ೦೦೦-೧೦೪ |
| ಶೇಂಗಾ ಖಂಡಿ | ,, | ೮೦-೮೫ |
| ಮೆಣಸಿನಕಾಯಿ ಹೇರು | ,, | ೧೨೫-೧೯೦ |
| ಮಿರ್ಜಿ ತಂಬಾಕು ಹೇರು | | ೧೨೫-೨೫೦ |
| ತಂಬಾಕ ಪಂಢರಪುರಿ | ,, | ೨೦೦-೨೫೦ |
| ತಂಬಾಕು ಅಕೋಳ(ಹೇರು) | | ೨೫೦-೩೫೦ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೦-೨೮೫ |
| ,, | ನಂ. ೨ | ೨೭೦-೨೭೫ |
| ,, | ನಂ. ೩ | ೨೬೦-೨೬೫ |
| ಅಪ್ಲಂಡ ಹತ್ತಿ | | ೨೬೦-೨೬೫ |
| ಜಿನ | | ೨೦೦-೨೦೫ |
| ಸಾಜಿನ | | ೧೮೨-೧೯೫ |
| ಡಬಲರೋಲ | | ೧೯೦-೧೯೫ |



## ೫ ಪ್ರಶ್ನೆಗಳು

೫ ಪ್ರಶ್ನೆಗಳನ್ನು ಬರೆದು ಕವರಿನಲ್ಲಿಟ್ಟು ಸೀಲ್ ಮಾಡಿ ಕಳುಹಿಸಿದರೆ ದೇವೀ ಮಹಿಮೆಯಿಂದ ಉತ್ತರ ರೂಪದಲ್ಲಿ ಭವಿಷ್ಯ ಬರೆದು ಅದೇ ನಿಮ್ಮ ಕವರಿನೊಂದಿಗೆ ರೂ. ೨ಕ್ಕೆ ವಿ. ಪಿ. ಮಾಡಲಾಗುವದು.

ಸಿದ್ಧಾಂತಿ **ಎಂ. ಆರ್. ಸುಬ್ಬಯ್ಯ**
ನಂ. ೧೨, ಕೆಂಚನಾಯಕನ ಗಲ್ಲಿ,
ಗಾಣಿಗರಪೇಟೆ, ಬೆಂಗಳೂರ ಸಿಟಿ.

## ಜೈ-ಹಿಂದ್ ರಾಷ್ಟ್ರಗೀತೆಗಳು

ಆಜಾದ್ ಹಿಂದ್ ಫೌಜಿನ ಗೀತೆಗಳು—ಸುಭಾಸ್ ಬೋಸ್, ಜವಹರ್‌ಲಾಲ್ ಅವರ ಆರ್ಟ ಕಾಗದದ ಮೂರು ಫೋಟೋಗಳು—ಹಿಂದೀ ಕವಾಯತ್ ಸೂಚನೆಗಳು—ಸ್ವಯಂ ಸೇವಕರಿಗೆ ಅತ್ಯಗತ್ಯ. ೦—೬—೦.

ಒಂದು ಪ್ರತಿಗೆ ಒಂದಾಣೆಯ ಆರು ಸ್ಟಾಂಪು ಕಳಹಿಸಿ.

## ಲೀಗ್ ಬೇಡಿಕೆ-ಬಾಬು ರಾಜೇಂದ್ರ ಪ್ರಸಾದ್ ೦-೬-೦

ಮಹಾ ವ್ಯಕ್ತಿಯಿಂದ ಬರೆಯಲಾದ ದೇಶದ ಮುಂದಿರುವ ಮಹದ್ ವಿಷಯ—ಎಲ್ಲರಿಗೂ ಅರ್ಥವಾಗುವ ನಿರೂಪಣೆ.

ಕಾಂಗ್ರೆಸ್ ಸಮಿತಿಗಳಿಗೂ ವರ್ತಕರಿಗೂ ವಿಶೇಷ ರಿಯಾಯಿತಿ.

## ಎಚ್ಚೆತ್ತ ಭಾರತ ಎತ್ತ ಸಾಗಿದೆ

ಗ. ಸ. ಹಾಲಪ್ಪ ಎಂ. ಎ., ( ಎರಡನೆ ಮುದ್ರಣ ) ೦-೧೨-೦

ಮುನ್ನುಡಿ ಕೆ. ಎಫ್. ಪಾಟೀಲ ಬೊಂಬಾಯಿ ರೆವಿನ್ಯೂ ಮಂತ್ರಿಗಳು. ಹತ್ತು ಅಪೂರ್ವ ವ್ಯಂಗ್ಯಚಿತ್ರಗಳು.

ವಿಚಾರ ಸಾಹಿತ್ಯ ಲಿಮಿಟೆಡ್
ಬೆಂಗಳೂರು ಸಿಟಿ.

## ಧರ್ಮರತ್ನಾಕರ ಗೋಪಾಲರಾಯರ ದಿವಾಳಿ

೧೦೦ ಕ್ಕೆ ೨೦-೩೦ ರಷ್ಟು ಬಡ್ಡಿಯ ಆಶೆ ತೋರಿಸಿ ಅದರಂತ ಬಡ್ಡಿ ಕೊಡುತ್ತ ಬಂದು ಜನರಲ್ಲಿ ವಿಶ್ವಾಸ ಹುಟ್ಟಿಸಿ ೩ ವರ್ಷಗಳಲ್ಲಿ ೪ ಕೋಟಿ ರೂ. ಯಷ್ಟು ಬಂಡವಲು ಶೇಖರಿಸಿ ಹಣದ ವ್ಯವಹಾರ ನಡೆಸಿದ್ದ ಧರ್ಮರತ್ನಾಕರ ಬಿ. ಎಸ್. ಗೋಪಾಲರಾಯರು ದಿವಾಳಿ ತೆಗೆದದ್ದರಿಂದ ಸಂಸ್ಥಾನದಲ್ಲೆಲ್ಲ ಹಾಹಾಕಾರವುಂಟಾಗಿದೆ. ಅವರಿಗೆ ಸಾಲಕೊಟ್ಟ ಸಾವಿರಾರು ಕುಟುಂಬಗಳು ಆರ್ಥಿಕ ಹಾನಿಗೆ ಒಳಗಾಗಿರುವವು. ಪೋಲೀಸರು ಈಗ ಗೋಪಾಲರಾಯರನ್ನು ಮೋಸದ ಅರೋಪದಿಂದ ಬಂಧಿಸಿ ಜಾಮೀನಿನ ಮೇಲೆ ಬಿಟ್ಟಿರುವರು.



ಸಣ್ಣ ಕತೆ * * *

# ತಾಯಿ-ಮಗು

ಲೇಖಕರು:
ನಾಗೇಶ ಶಾನಭಾಗ
ಮುಂಬಯಿ

ಸೀತಾಪತಿ ಹೆಸರಾದ ವಕೀಲ. ಇಡೀ ದಿನವೂ ಅವನಿಗೆ ಕಕ್ಷಿಗಾರರಿಂದ ಬಿಡುಗಡೆಯಿಲ್ಲ. ತನ್ನ ವಾಕ್‌ಚಾತುರ್ಯದಿಂದ ಹಿಡಿದ ಪ್ರಕರಣಗಳಲ್ಲಿ ಜಯಶಾಲಿಯಾಗುತ್ತಿದ್ದ. ಆದರೆ ಇನ್ನಿತರ ವಕೀಲರಂತೆ ಸಟೆಯನ್ನು ನಿಜವಾಗಿಸುವದಕ್ಕೆ ಹೋಗುವವನಲ್ಲ. ನ್ಯಾಯವಾದ ಪ್ರಕರಣಗಳನ್ನೇ ತೆಗೆದುಕೊಳ್ಳುತ್ತಿದ್ದ. ಕೀರ ಸನಿಯುಗೆಳೆಯರು ಅಂತಿಂತಹ ಅಲ್ಲದ ಸಲ್ಲದ ಪ್ರಕರಣಗಳನ್ನು ತರುತ್ತಿದ್ದರು. ಆದರೆ ಸೀತಾಪತಿ ಅವರ ಭಿಡೆ ಮುರವತ್ತುಗಳಿಗೆ ಒಳಗಾಗುತ್ತಿರಲಿಲ್ಲ.

ಮನೆಯಲ್ಲಿ ಸೀತಾಪತಿಗೆ ಹಿರಿಯ ಕುಟುಂಬದ ಹೊಣೆಯನ್ನೇನೂ ಹೊರಬೇಕಾಗಿರಲಿಲ್ಲ. ಏಕೆಂದರೆ ಮನೆಯಲ್ಲಿ ಇದ್ದವರೆಂದರೆ ಹೆಂಡತಿ ರಾಧೆ, ಮತ್ತು ಚಿಕ್ಕ ಮಗಳು ಆಶಾಲತಾ. ಅವರೊಂದಿಗೆ ಮನೆಯಲ್ಲಿ ಆಳು ಹೋಳುಗಳಿಗೇನೂ ಕೊರತೆಯಿರಲಿಲ್ಲ. ಚನ್ನಾದ ಅಡಿಗೆ ಮಾಡಿಹಾಕಲು ಒಬ್ಬ ಅಡಿಗೆಯವನಿದ್ದಾನೆ. ಮಗುವನ್ನು ಆಡಿಸಿ ತಿರುಗಿಸಿಕೊಂಡು ಬರುವದಕ್ಕೆ ಒಬ್ಬ ದಾದಿಯಿದ್ದಾಳೆ. ಹೊರಗಿನ ಕೆಲಸಕ್ಕೆ ೨-೩ ಜನ ಆಳುಗಳು. ಹೆಸರಾಂತ ವಕೀಲನಾದ್ದರಿಂದ ಧನ-ಕನಕಗಳಿಗೇನೂ ಕಡಿಮೆಯಿರಲಿಲ್ಲ. ಹೆಂಡತಿ ಮತ್ತು ಮಗುವಿನ ಮೈಮೇಲೆ ತುಂಬಾ ಆಭರಣಗಳಿದ್ದವು. ಬೆಳ್ಳಿಯ ಬೊಂಬೆಗಳೋ, ಬಟ್ಟಲಗಳೋ ಕಪಾಟಿನಲ್ಲಿ ಸಜ್ಜಾಗಿ ಇರಿಸಲ್ಪಟ್ಟಿದ್ದವು. ಸೀತಾಪತಿ ಹೆಂಡತಿ ರಾಧೆಯ ಮನವನ್ನು ತುಸುವೂ ನೋಯಿಸುತ್ತಿರಲಿಲ್ಲ. ಹೀಗಾಗಿ ಮನೆಯಲ್ಲಿ ಆರಾಮಗಳಿಗೆ ಕೊರತೆಯಿರಲಿಲ್ಲ.

ರಾಧೆ ಹುಟ್ಟಾ ಸಿರಿವಂತರ ಮನೆಯವಳಲ್ಲ. ಮಧ್ಯಮ ವರ್ಗದಲ್ಲಿ ಬೆಳೆದಿದ್ದಳು. ಅವಳ ತಂದೆ ದೂರದ ಹಳ್ಳಿಯೊಂದರಲ್ಲಿ ಗ್ರಾಮಾಧಿಕಾರಿಯಾಗಿದ್ದ. ಅವನು ರಾಧೆಯ ವರಶೋಧನೆಯಲ್ಲಿ ಸೋತು ಹೋಗಿದ್ದ. ಅದಾಗ ರಾಧೆಗೆ ಈಗಿನ ಮಾನದಲ್ಲಿ ಅಷ್ಟೇನೂ ವಯಸ್ಸಾಗಿರಲಿಲ್ಲ. ಹದಿನೈದರ ಮಟ್ಟಕ್ಕೆ ಬಂದಿತ್ತು. ಆದರೂ ಹದಿನಾರು ವರ್ಷದ ಒಳಗಾಗಿ ಮಗಳಿಗೊಂದು ಮದುವೆ ಮಾಡಿದರೆ ತಾನು ಬದುಕಿದೆ ಎಂದು ತಿಳಿಯುತ್ತಿದ್ದ ಅವಳ ತಂದೆ. ದೇವರೇ ಕರುಣೆ ತೋರಿದನೆನ್ನಬೇಕು. ಪುರೋಹಿತರ ಮಧ್ಯಸ್ಥಿಕೆಯಿಂದ ಸೀತಾಪತಿಯೊಡನೆ ಸಂಬಂಧ ನಿಶ್ಚಯವಾಯಿತು. ದಿನಕಳೆಯದೆ ಮದುವೆಯೂ ಆಗಿ ಹೋಯಿತು. ಆ ಮದುವೆಯಿಂದ ಎಲ್ಲರಿಗೂ ಸಮಾಧಾನವಾಗಿತ್ತು. ರಾಧೆಯ ತಂದೆ ತಾಯಿಗಳಿಗೆ ತಮ್ಮ ಮಗಳಿಗೆ ತಮ್ಮ ಮಟ್ಟಕ್ಕಿಂತ ಮೇಲಿನ ವರನು ಸಿಕ್ಕನಲ್ಲ ಎಂಬ ಹಿಗ್ಗು. ರಾಧೆಗೆ ತಾನು ಸಿರಿವಂತರ ಮನೆಗೆ ಹೋಗಬೇಕೆಂಬ ಆಶೆ ಮೊದಲಿನಿಂದಲೂ ಇತ್ತು. ಅವಳ ಆಶೆಯೂ ಪೂರ್ತಿಯಾಯಿತು. ಇನ್ನು ಸೀತಾಪತಿ ಮುಂಚಿನಿಂದಲೂ ಸಿರಿವಂತರ ಹೆಣ್ಣೆಂದರೆ ಹಿಂಜರಿಯುತ್ತಿದ್ದ. ಅವನ ಮನದಲ್ಲಿ ಸಿರಿವಂತರ ಹೆಣ್ಣಿನೊಡನೆ ಸಂಸಾರ ಸುಗಮ ಮತ್ತು ಸುಖಕರವಲ್ಲವೆಂಬ ತಿಳವಳಿಕೆಯಾಗಿತ್ತು. ರಾಧೆಯಂತಹ ಸುಂದರ ಹಾಗು ತುಸು ಕಲಿತ ಹೆಣ್ಣು ತನಗೆ ಸಿಕ್ಕಿದ್ದು ತನ್ನ ಭಾಗ್ಯವೆಂದೆಣಿಸಿದ.

ಆದರೆ ರಾಧೆ ಗಂಡನ ಮನೆಗೆ ಬರುತ್ತಲೇ ಪೂರಾ ಬದಲಾದಳು. ತನ್ನ ಮೊದಲಿನ ಇರವನ್ನೇ ಮರೆತು ಬಿಟ್ಟಳು. ತನ್ನ ಚಿಕ್ಕಂದಿನ ಕಷ್ಟಗಳ ಮರೆವೆಯಾಯಿತು. ಜೀವನ ಇರುವದು ಉಪಭೋಗಿಸುವದಕ್ಕೆ ಎಂದು ಅವಳು ತಿಳಿದಿದ್ದಳು. ಹೀಗಾಗಿ ಗಂಡ ತನ್ನ ಉಪಭೋಗ ಸಾಮಗ್ರಿಗಳನ್ನು ಪೂರೈಸುವ ಆಳು ಎಂದು ತಿಳಿದಷ್ಟೇ ಹೊರತು ಆರಾಧ್ಯದೈವತವೆಂದು ತಿಳಿಯಲಿಲ್ಲ. ಹೀಗಾಗಿ ಗಂಡಹೆಂಡಿರಲ್ಲಿ ಇರಬೇಕಾದ ಮೇಳವಿರಲಿಲ್ಲ. ಸೀತಾಪತಿ ಯಾವಾಗಲೂ ಉದಾಸೀನನಂತಿರುತ್ತಿದ್ದ. ಹೆಂಡತಿಯು ಬೇಕೆಂದದ್ದನ್ನು ತರಿಸುತ್ತಿದ್ದ. ಹೊರತು ಪ್ರತಿಯಾಗಿ ಹೆಂಡತಿಯೊಡನೆ ಜಗಳವಾಡಿ ಇನ್ನೂ ವಿರಸವನ್ನಾಗಿಸಿ ದ್ವೇಷ ಬೆಳೆಯಲು ಎಡೆಗೊಡಲಿಲ್ಲ. ಹೆಂಡತಿಯ ಮನದೊಲವನ್ನು ಅರಿತುಕೊಂಡಿದ್ದನಾದ್ದರಿಂದ ಸುಖವಾಗಿ ಸಂಸಾರ ಸಾಗುತ್ತಿದ್ದಿತು.

ಸೀತಾಪತಿ ರಾಧೆಯರ ಪ್ರೇಮಕ್ಕೆ ಫಲವಾಗಿ ಆಶಾಲತೆ ಹುಟ್ಟಿದಳು. ಮಗಳು ಹುಟ್ಟಿದ ದಿನ ತಂದೆ ತಾಯಿಗಳ ಹಿಗ್ಗು ಹೇಳತೀರದು. ತಿರುಕರಿಗೆಲ್ಲ ದುಡ್ಡು ದಕ್ಷಿಣೆ ಹಂಚಿಯಾಯಿತು. ನಾಮಕರಣದ ದಿನ ಬ್ರಾಹ್ಮಣರಿಗೆ ಭೂರಿ ಭೋಜನವಾಯಿತು. ಸೀತಾಪತಿ ದಣಿದು ಬಂದಾಗಲೆಲ್ಲ ಚಿಕ್ಕ ಮಗು ನಸುನಕ್ಕು ಮನವನ್ನು ತಣಿಸುತ್ತಿತ್ತು. ಈ ರೀತಿ ಮಗು ಬೆಳೆಯುತ್ತಿತ್ತು. ಆದರೆ ರಾಧೆಯ ಮನ ಆ ಕಡೆಯಿರಲಿಲ್ಲ. ರಾಧೆ ಸಿರಿವಂತಿಗೆಯ ಮಬ್ಬಿನಲ್ಲಿದ್ದಳು. ನಿಸರ್ಗಕ್ಕೆ ಸೋತು ಹೋಗಿ ಮಗುವನ್ನೇನೋ ಹೆತ್ತಳು. ಆದರೆ ಅದರ ಆರೈಕೆಯ ಭಾರ ಅವಳು ವಹಿಸಲಿಲ್ಲ. ಅದಕ್ಕಾಗಿ ಒಬ್ಬ ದಾದಿಯ ನೇಮಕವಾಯಿತು. ಚಿಕ್ಕಮಗುವಿಗೆ ತಾಯಿಯ ಸುಖವಿರಲಿಲ್ಲ. ದುರ್ಭಾಗ್ಯದ ಮಗು!

೦ ೦ ೦ ೦

ರಾಧಕ್ಕನಿಗೆ ಸಬ್ ಜಜ್ಜರ ಹೆಂಡತಿಯ ಕರೆ ಬಂದಿತ್ತು. ಅವಸರದಿಂದ ಸ್ವತಃ ಕಾಫಿಗೆ ಇಟ್ಟಳು. ಕಾಫಿ ಕುಡಿದು ಸಿಂಗರಿಸಿಕೊಂಡು ದಾದಿಗೆ ತಾನು ಸಬ್ ಜಜ್ಜರ ಹೆಂಡತಿಯ ಕಡೆಗೆ ಹೋಗಿ ಬರುವೆ ಹಾಗೆಯೇ ಸಿನೀಮಾಕ್ಕೆ ಹೋಗಿ ಬರುವೆ ಎಂದು ಹೇಳಬೇಕಾದುದೆಲ್ಲವನ್ನು ಹೇಳಿದಳು. ಅಡಿಗೆಯವನಿಗೆ ಒಡೆಯರು ಬಂದ ಕೂಡಲೇ ತನಗಾಗಿ ಕಾಯದೆ ಬಡಿಸಲಿಕ್ಕೆ ಹೇಳಿ ಮೋಟಾರಿನಲ್ಲಿ ಹೊರಟಳು.

ಆಶಾಲತಾ "ಅಮ್ಮಾ" ಎಂದು ಅಳಲಾರಂಭಿಸಿದಳು. ದಾದಿ ಅವಳನ್ನು ಅತ್ತಿತ್ತ ಹಿಡಿದು ತಿರುಗಾಡಿಸಿದಳು. ಹೊಟ್ಟೆ ಹಸಿದಿರಬೇಕೆಂದು ಹಾಲು ಕುಡಿಸಿದಳು. ಆದರೆ ಅಳುವೇನೂ ತಡೆಯಲಿಲ್ಲ. ದಾದಿಯಾದರೂ ಮತ್ತೇನು ಮಾಡಿಯಾಳು?

ಸೀತಾಪತಿ ಕೋರ್ಟಿನಿಂದ ಮನೆಗೆ ಮರಳಿದ. ಮನೆಗೆ ಬಂದರೆ ಹೆಂಡತಿಯಿರಲಿಲ್ಲ. ಮಗುವಿನ ಮುಖವನ್ನು ಬಾಗಿಲಲ್ಲಿ ಕಾಣಲಿಲ್ಲ. ಅದರ ಬದಲು ಕೋಣೆಯೊಳಗಿನಿಂದ ಅಳುವದನು ಕೇಳಬರುತ್ತಿತ್ತು. ಒಳಕ್ಕೆ ಹೋಗಿ ವಿಚಾರಿಸಿದ.

"ಏನಮ್ಮಾ, ಮಗುವೇಕೆ ಅಳುತ್ತದೆ?

"ಏನೂ ಇಲ್ಲ. ತಾಯಿ ಅವಳನ್ನು ಬಿಟ್ಟು ಸಿನೀಮಾಕ್ಕೆ ಹೋದಳು. ಮನೆಯಿಂದ ಹೊರಬೀಳುವಾಗ ತಾಯಿಯನ್ನು ನೋಡಿದಳು. ಆಗಿನಿಂದ ತೆರವಿಲ್ಲದೆ ಅಳುತ್ತಿದ್ದಾಳೆ."

"ನೋಡೋಣ" ಎಂದು ಸೀತಾಪತಿ "ಬಾಮ್ಮಾ ಆಶಾ" ಎಂದು ಮಗುವನ್ನು ಎತ್ತಿಕೊಂಡ. ಒಮ್ಮೆಲೆ ಮೈ ಅದುರಿತು. ಮಗಳ ಮೈ ಕೆಂಡದಂತೆ ಸುಡುತ್ತಿತ್ತು. ಜ್ವರದ ಜೋರು ತಾಳಿಕೊಳ್ಳಲಾಗದೆ ಅಳುತ್ತಿತ್ತು ಮಗು.

"ಮಗುವಿಗೆ ತುಂಬಾ ಜ್ವರ ಗೊತ್ತಿಲ್ಲವೇನಮ್ಮಾ ನಿನಗೆ?"

"ಗೊತ್ತಿದೆ ಆದರೆ...

"ಆದರೆ ಏನು?"

"ಅಮ್ಮನವರು ಸಿನಿಮಾಕ್ಕೆ ಹೊರಟಾಗಲೇ ಮೈ ತುಸಾ ಬಿಸಿಯಾಗಿತ್ತು. ನಾನು ಹೇಳಬೇಕೆಂದಿದ್ದೆ. ಆದರೆ ಸಬ್ ಜಜ್ಜರ ಮನೆಗೆ ಹೊರಟದ್ದ ಅಮ್ಮನವರಿಗೆ ಸಿಟ್ಟು ಬಂದೀತೆಂದು ಸುಮ್ಮನಾದೆ."

"ನೀನು ಹೇಳಬೇಕಾಗಿತ್ತು. ತಾಯಿಗೆ ಮಗುವಿನ ಪರಿವೆ ಇರಬೇಡವೆ? ಯಾವಾಗ ಬರುವಳೋ?" ಎಂದು ಸೀತಾಪತಿ ತಿರುಗಿ ಮಗುವನ್ನು ದಾದಿಯ ಕೈಗೆ ಇತ್ತ. ಅಳುವು ಮುಂಚಿನಂತೆಯೇ ಇತ್ತು. "ತುಸು ನೋಡಿಕೋಮ್ಮ ನಾನು ಊಟ ಮುಗಿಸಿ ಡಾಕ್ಟರರನ್ನು ಕರೆತರುತ್ತೇನೆ." ಎಂದು ಅಡಿಗೆಯ ಮನೆಯನ್ನು ಹೊಕ್ಕ.

ಅಡಿಗೆ ಸಿದ್ಧವಾಗಿತ್ತು. ಎಲೆಯ ಹತ್ತಿರ ಕುಳಿತುತ್ತಲೇ ಅಡಿಗೆಯವ ಬಡಿಸಿದ. ಆದರೆ ಸೀತಾಪತಿಗೆ ಅಡಿಗೆ ರುಚಿಸಲಿಲ್ಲ. ಅತ್ತ ಮಗುವಿನ ಕಿರುಚಾಟ. ಇತ್ತ ಹೆಂಡತಿ ರಾಧೆ ಮನೆಯಲ್ಲಿಲ್ಲ. ತಾನು ಮನೆ ಬಿಟ್ಟಾದರೂ ಹೋಗುವದು ಹೇಗೆ? ಎಂಬ ಆಲೋಚನೆಯಾಯಿತು. ನಾಲ್ಕೈದು ತುತ್ತುಗಳನ್ನು ನುಂಗಿ ಊಟದ ಶಾಸ್ತ್ರ ಮುಗಿಸಿದ.

ಮಗುವಿನ ಕೋಣೆಗೆ ಬಂದು ತುಸು ಹೊತ್ತು ಮಗುವನ್ನು ಸಮದಾಯಿಸಲು ಯತ್ನಿಸಿದ. ಆದರೆ ಸಾಧ್ಯವಾಗಲಿಲ್ಲ. ಡಾಕ್ಟರರನ್ನು ಕರೆತರಲು ಆಳನ್ನು ಕಳಿಸಲೇ ಎಂದು ಯೋಚಿಸಿದ. ಆದರೆ ಡಾಕ್ಟರರು ರಾತ್ರಿಯ ಹೊತ್ತು ಬರದಿದ್ದರೆ ಎಂಬ ಶಂಕೆ. ಕಾರಣ ಮನವನ್ನು ಸ್ಥಿರ ಮಾಡಿ ತಾನೇ ಕರೆಯಲು ಹೊರಟು ಹೋದ.

ರಾಧೆ ಗೊತ್ತಾದ ವೇಳೆಗೆ ನಿಯತ ಸ್ಥಳಕ್ಕೆ ತಲುಪಿದಳು. ಸಿನೀಮಾ ಕೂಡ ನೋಡಿಯಾಯಿತು. ಮರಳುವಾಗ ರಾತ್ರಿಯಾಯಿತು. ಗಾರಿಯಲ್ಲಿ ಕತ್ತಲಲ್ಲಿ ಎಡವೃತ್ತ ಮುಗ್ಗರಿಸುತ್ತ ಮನೆಗೆ ಬಂದು ಮುಟ್ಟಿದಳು.

ಆದರೆ ಮನೆಯ ವಾತಾವರಣ ತಾನು ಹೊರಗೆ ಹೋಗುವಾಗಿನಕ್ಕಿಂತ ತೀರ ಭಿನ್ನವಾಗಿತ್ತು. ಮನೆಯ ಆಳು ಹೋಳುಗಳ ಗದ್ದಲ ಗೊಂದಲ ಒಂದೂ ಇರಲಿಲ್ಲ. ಬರಿ ಮಗುವಿನ ಆಕ್ರೋಶ ಒಂದು ಕೇಳಿಸುತಿತ್ತು. ಅವಸರದಿಂದ ಆ ಕೋಣೆಗೆ ಓಡಿದಳು. ತಾಯಿ ಎಂದ ಮೇಲೆ ಅವಳ ಹೃದಯ ಕರಗದಿದ್ದೀತೆ? ದಾದಿಯ ಕಡೆಯಿಂದ ಮಗುವನ್ನು ತನ್ನ ಕೈಗೆ ತೆಗೆದುಕೊಂಡಳು. ಮಗು ಅಳುವನ್ನು ತಡೆಯಿತು. ಜ್ವರದಿಂದ ಮುಂಚಿನಂತೆಯೇ ನರಳುತ್ತಿದ್ದಿತೇನೋ ಅಹುದು. ಆದರೆ ಅಳುತ್ತಿರಲಿಲ್ಲ. ಮುಖದ ಮೇಲೆ ಆಯಾಸದ ಚಿಹ್ನವಿದ್ದರೂ ತೃಪ್ತಿಯ ಸುಳಿವು ಇದ್ದಿತು.

ಸೀತಾಪತಿ ಡಾಕ್ಟರರೊಡನೆ ಕೋಣೆಯೊಳಕ್ಕೆ ಬಂದ. ಡಾಕ್ಟರರು ಮಗುವನ್ನು ಹಾಸಿಗೆಯ ಮೇಲೆ ಮಲಗಿಸಿ ಪರೀಕ್ಷೆ ಮುಗಿಸಿದರು. ಬರಿ ಶೀತಜ್ವರ. ಹೆದರುವ ಕಾರಣವಿಲ್ಲೆಂದು ಡಾಕ್ಟರರು ಹೇಳಿ ಹೊರಟು ಹೋದರು. ಸೀತಾಪತಿ ಹೆಂಡತಿಯನ್ನು ಮಾತನಾಡಿಸಲೇ ಇಲ್ಲ. ಅವನು ಹೆಂಡತಿಯ ಗುಣವನ್ನು ಅರಿತಿದ್ದ. ಮುಂಚೆ ಹೋದ ಕಾರ್ಯಕ್ಕೆ ಮಾತನಾಡಿ ಫಲವಿಲ್ಲವೆಂದು ಸುಮ್ಮನೆ ಕೋಣೆಯೊಳಕ್ಕೆ ಹೊರಟು ಹೋದ.

"ಏನಮ್ಮಾ ನಾನು ಹೊರಗೆ ಹೋಗುವಾಗ ನನಗೆ ಒಂದಿಷ್ಟು ಹೇಳಬಾರದಿತ್ತೇ? ನನಗೆ ಗೊತ್ತಿದ್ದರೆ ನಾನು ಹೋಗುತ್ತಲೇ ಇರಲಿಲ್ಲ.

"ಹಾಗಲ್ಲ. ಅಮ್ಮನವರೇ, ನಾನು ಹೇಳಬೇಕೆಂದು ಮಾಡಿದ್ದೆ......

"ಯಾಕೆ ಹೇಳಲಿಲ್ಲ. ಮರೆತುಹೋಯಿತೆ?"

"ಅಲ್ಲ ತಾಯಿ ನೀವು ಏನಾದರೂ ಹೇಳ..." ದಾದಿ ತೊದಲಿದಳು.

"ಇದೆಲ್ಲ ನಿನ್ನ ಕಾರಣ ನೋಡು. ಮುಂದಿನ ಸಾರೆಯಾದರೂ ಜೋಕೆಯಾಗಿರು" ಎಂದು ರಾಧೆ ಮಗುವನ್ನು ತಿರುಗಿ ದಾದಿಯ ವಶಕ್ಕೆ ಕೊಟ್ಟು ತನ್ನ ಕೋಣೆಗೆ ಹೋದಳು.

ಆಶಾಲತೆಗೆ ಎರಡು ದಿನ ಹಾಸಿಗೆಯಲ್ಲಿಯೇ ಇರಬೇಕಾಯ್ತು. ತಂದೆಯು ಜಾಗರೂಕತೆ ವಹಿಸಿದ್ದರಿಂದ ಮತ್ತು ದಾದಿಯು ಮನಸ್ಸುಗೊಟ್ಟು ಆರೈಕೆ ಮಾಡಿದ್ದರಿಂದ ಬೇಗನೆ ಗುಣವಾಯಿತು. ಆದರೆ ತಾಯಿಯು ಮಾತ್ರ ತೀರಾ ಅಲಿಪ್ತಳಾಗಿ ಉಳಿದಳು. ಮಗುವೆಂದರೆ ವಿಲಾಸದಲ್ಲಿ ತೊಂದರೆ—ತಡೆ ಎಂದು ತಿಳಿದಿರಬೇಕು ಅವಳು!

೦ ೦ ೦ ೦

"ರಾಧಾ, ಸಿನಿಮಾಕ್ಕೆ ಹೋಗೋಣವೆ?" ಎಂದು ಸೀತಾಪತಿ ದಣಿದವನಂತೆ ಗಾಳಿ ಹಾಕಿಕೊಳ್ಳುತ್ತ ಹೆಂಡತಿಯನ್ನು ಕೇಳಿದ.

"ಯಾವ ಸಿನೀಮಾಕ್ಕೆ ಹೋಗುತ್ತೀರಿ?" ಎಂದು ತಿರುಗಿ ಪ್ರಶ್ನೆ ಬಂದಿತು.

"ನೀನು ಯಾವದಕ್ಕೆ ಹೇಳುತ್ತೀಯೋ ಅದಕ್ಕೆ Royal Talkies ನಲ್ಲಿ 'ಜೀವನಪ್ರಭಾತ' ನಡೆಯುತ್ತಾ ಇದೆ. ಹೋಗೋಣವೆ?"

"ಹಾಂ"

"ಇವತ್ತು ನಮ್ಮ ಆಶಾಲತಾಳ್ನ ಒಯ್ಯಬೇಕು ನೋಡು ರಾಧಾ" ಎಂದು ಸೀತಾಪತಿ ಹೆದರಿ ಹೆದರಿ ಒಂದು ಊಹ ಸೂಚನೆಯನ್ನು ಮುಂದೊಡ್ಡಿದ.

"ನಾನೊಲ್ಲೆ. ಅದು ಬಹಳ ತ್ರಾಸ ಕೊಡುತ್ತಾಳೆ ನೋಡಿ. ಒಂದು ಕುಣಾವೂ ಸಿನಿಮಾ ನೋಡಲಿಕ್ಕೆ ಬಿಡುವದಿಲ್ಲ. ಮತ್ತೆ ಸೀರೆ ಕುಪ್ಪಸವನ್ನು ಹಾಳು ಮಾಡುತ್ತಾಳೆ. ಒಂದು ಪಕ್ಷ ಅವಳನ್ನು ಒಯ್ಯಬೇಕು, ಇದ್ದರೆ ದಾದಿಯನ್ನೂ ಸಂಗಾತ ಕರಕೊಂಡು ಹೋಗುವಾ"

ಸೀತಾಪತಿ ಮನದಲ್ಲಿಯೇ ನೊಂದುಕೊಂಡ. ತನ್ನ ಮಗುವಿಗೆ ತಾಯಿಸುಖವಿಲ್ಲವಲ್ಲ!

"ಬೇಡ ಇವತ್ತು ಬೇಡ ಮುಂದಿನ ಸಾರೆ ಕರೆಕೊಂಡು ಹೋಗುವಾ" ಎಂದು ತನ್ನ ಊಹ ಸೂಚನೆಯನ್ನು ಹಿಂದೆಗೆದುಕೊಂಡ. ಕಾರಣವೆಂದರೆ ತಾನು ಮಗುವನ್ನು ತಾಯಿಯ ಬಳಿಗೆ ಹೋಗದಂತೆ ತಡೆದು ಹಿಡಿಯಲು ಸಮರ್ಥನಲ್ಲವೆಂಬದು. ಅವಳಿಗೆ ಮಗಳ ಮೇಲೆ ಪ್ರೀತಿಯು ರಲಿಲ್ಲವೆಂದಲ್ಲ.

"ಹಾಗಾದರೆ ನಾನು ಬಂದೆ" ಎಂದು ಸಿಂಗಾರದ ಕೋಣೆಗೆ ನಡೆದಳು.

ಎಲ್ಲವೂ ಸಿದ್ಧವಾಯಿತು. ಗಂಡಹೆಂಡಿರು ಇಬ್ಬರೂ ಹೊರಡಲನುವಾದರು. ಆಕಸ್ಮಾತ್ ಆಶಾಲತಾ ತಂದೆ-ತಾಯಿಗಳನ್ನು ನೋಡಿದಳು, ಅಳಲಾರಂಭಿಸಿದಳು. ರಾಧೆಯು ಗದರಿಕೆ ದಾದಿಯನ್ನು ಅಲ್ಲಿಂದ ಆಶಾಲತೆಯೊಡನೆ ಓಡಿಸಿತು.

೦ ೦ ೦ ೦

ಸಿನಿಮಾಗೃಹದ ಬಳಿ ಜನರು ಗುಂಪುಗೂಡಿದ್ದರು. ಹಲವು ತರಹದ ಜನಕ್ಕೆ ಆಶ್ರಯವಾಗಿತ್ತು ಆ ತಾಣ. ಆಟ ಸುರುವಾಗುವದಕ್ಕೆ ಇನ್ನೂ ವೇಳೆಯಿದ್ದಿತು. ಜನರೆಲ್ಲ ನಿಶ್ಚಿಂತರಾಗಿ ಅತ್ತಿತ್ತ ಅಲೆದಾಡುತ್ತಿದ್ದರು. ಅವರು ನಿಂತಲ್ಲೆಲ್ಲ ತಿರುಕರ ತಂಡ ಅವರನು ಕಾಡುತ್ತಿತ್ತು; ಬೇಡುತ್ತಿತ್ತು. ರಾಧೆ-ಸೀತಾಪತಿ ಇಬ್ಬರೂ ಹೊರಗೆ ಕಾದಿದ್ದರು. ಒಬ್ಬ ಮುದುಕಿ "ಅಮ್ಮಾ, ಒಂದು ದುಡ್ಡು," ಎಂದು ರಾಧೆಯ ಬಳಿ ಬಂದು ಅಂಗಲಾಚಿ ಬೇಡಿದಳು. ರಾಧೆ ಗಮನಿಸಲಿಲ್ಲ. ಅವಳ ಲಕ್ಷ ಚಿತ್ರಮಂಟಪದ ಕಡೆಗೆ ಇದ್ದಿತು. ಮತ್ತೊಮ್ಮೆ, ಮುದುಕಿ ಸೊಂಟದ ಮೇಲಿದ್ದ ಮಗುವನ್ನು ಮುಂದೆ ತೋರಿ, "ಅಮ್ಮಾ, ತಾಯಿ, ಈ ಮಗೂಗೆ ಮೂರು ದಿನದಿಂದ ಜ್ವರಾ. ಒಂದು ತುತ್ತು ಗಂಜೀನೂ ಇಲ್ಲ ತಾಯಿ."

ರಾಧೆಯ ಮನ ಕರಗಲಿಲ್ಲ. ಮುದುಕಿಯ ಎಲಬುಗಳೆಲ್ಲ ಎದ್ದು ತೋರುತ್ತಿದ್ದವು. ಚರ್ಮವೆಲ್ಲ ಜೋಲುತ್ತಿದ್ದಿತು. ಹೊಟ್ಟೆಗೇನೂ ಇಲ್ಲದೆ ಹೊಟ್ಟೆ ಬೆನ್ನಿಗೆ ತಾಗಿದಂತಿತ್ತು. ಹರಕು ಸೀರೆಯ ತುಂಡೊಂದನ್ನು ಉಟ್ಟಿದ್ದಳು. ಕೆಲವು ಜನ ದಯಾಳುಗಳು ಬಿಸ್ಕತ್ತುಗಳನ್ನು ಅರ್ಧ ಮುರಿದು ಈ ಮುದುಕಿಯ ಕಡೆ ಚಲ್ಲುತ್ತಿದ್ದರು. ಮುದುಕಿ ಮಗುವಿಗೆ ತಿನಿಸುತ್ತಿದ್ದಳು. ತನಗಾಗಿ ಅವಳು ಬೇಡುತ್ತಿರಲಿಲ್ಲ. ಅವಳ ಮುಖಮುದ್ರೆಯ ಮೇಲಿಂದ ಮುದುಕೆಯಂತೆ ತೋರುತ್ತಿರಲಿಲ್ಲ. ತಾರುಣ್ಯದಲ್ಲಿಯ ದೇಹದ ಕಟ್ಟಿನ ಗುರುತು ಇನ್ನೂ ಮಾಸಿರಲಿಲ್ಲ. ಇದೀಗಿನ ಮುಪ್ಪು ಹೊಟ್ಟೆಗಿಲ್ಲದ್ದರಿಂದ; ಇರಲು ತಾಣವಿಲ್ಲದ್ದರಿಂದ. ತನಗಾಗಿ ಕೇಳುವವರೇ ಇಲ್ಲದರಿಂದ. ಅಕಾಲ ವೃದ್ಧಾಪ್ಯ. ದುಃಖ, ದಾರಿದ್ರ್ಯಗಳೊಡನೆ ಹೊಟ್ಟೆಯ ಮಗುವಿನ ಪೋಷಣೆಯ ಭಾರ. ತನ್ನ ಹೊಟ್ಟೆಗೆ ಇಲ್ಲವೆಂದು ಮಗುವನ್ನು ಬಲಿಗೊಡುವದೇ? ಒಂಭತ್ತು ತಿಂಗಳು ಕಾಲ ಅವಕ್ಕಾಗಿ ಕಷ್ಟಪಟ್ಟು ತನ್ನ ಮಾಂಸದ ಮುದ್ದೆಯನ್ನು ಸಾಯಗೊಡುವದೇ? ಅದು ಅವಳಿಂದಾಗದು. ಅವಳಿಗೆ ಇಂದು ಜಗದಲ್ಲಿ ಯಾರೂ ಇಲ್ಲ. ಇದೀಗ ಸಾಯುಬಾದ ಮಗುವೊಂದೇ ಅವಳದು. ಅದೇ ಅವಳ ಸರ್ವಸ್ವ. ಅವಳ ಸಾವು ಇರುವು ಮಗುವಿನ ಸಾವು-ಇರುವನ್ನು ಅವಲಂಬಿಸಿದೆ ಹೊರತು ಇನ್ನಾರಿಗಾಗಿ ಅವಳು ಬದುಕಬೇಕು?

ರಾಧೆಗೆ ಇದೆಲ್ಲ ಹೇಗೆ ತಿಳಿಯಬೇಕು? ಅವಳು ತನ್ನ ಹಿರಿಮೆಯ ಮಬ್ಬಿನಲ್ಲಿಯೇ ಇದ್ದಳು. ತನ್ನನ್ನು ತನ್ನ ತಂದೆ ತಾಯಿಗಳು ಹೇಗೆ ಪೋಷಿ

—೧೬ನೇ ಪುಟಕ್ಕೆ

—೧೬ನೇ ಪುಟಕ್ಕೆ

Reg. No. B. 3148 | LICENCE No. 3 Licenced to Post without Prepayment | KARMAVEER 23-12-46




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಡಿಸೆಂಬರ ೨೩ ರಿಂದ ೨೯ ರ ವರೆಗೆ

## ಮೇಷ

ನಿಮ್ಮ ಹಾಗು ಹೆಂಡತಿಯ ಪ್ರಕೃತಿ ಅನುಕೂಲ ಆದರೆ ವೃದ್ಧಜನರಿಗೆ ಕ್ಲೇಶ. ಮಕ್ಕಳಲ್ಲಿ ಬಹಳ ಪ್ರಗತಿ. ಆದರೂ ಬಹುತರ ವಿಷಯುಗಳಲ್ಲಿ ಪ್ರಾಪಂಚಿಕ ತೊಂದರೆ ಬಹಳ ದಣಿಸುತ್ತವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಲಾಭದಲ್ಲಿ ಕೆಲ ಅಡಚಣಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಮಿತ್ರರು ಸಾಳ್ಳು ಸಳ್ಳೇ ಬುದ್ಧಿಭೇದ ಮಾಡಿ ಅಂಜಿಸವ ನೀಚ ಪ್ರಯತ್ನ ಮಾಡುವರು. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೩, ೨೪, ೨೫, ೨೬ ಅನುಕೂಲ.

## ವೃಷಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಕೆಟ್ಟ. ಕುಟುಂಬದಲ್ಲಿಯು ಎಲ್ಲರಗೂಡ ವಿರೋಧ. ಬಂಧುವರ್ಗದವರಲ್ಲಿಯೂ ಕೈಗೆ ಕೈ ಹತ್ತುವ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಅನುಕೂಲ. ಆದರೆ ಲಾಭ ಬಹಳ ಕಡಮೆ. ಶತ್ರುಗಳಿಗಿಂತ ಮಿತ್ರರಿಂದಲೆ ಕುಟಿಲ ವರ್ತನೆ. ಪರಸ್ತ್ರೀ ಅಭಿಲಾಷೆಯ ಅತೀವ ಸ್ವಾರ್ಥದಲ್ಲಿ ಹಾನಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಜೋರು. ಪ್ರವಾಸಾದಿ ಕೆಲಸ ಕಷ್ಟಸಾಧ್ಯ. ರೋಹಿಣಿಯ ಕೊನೆಯ ೩ ಮತ್ತು ಮೃಗದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೬, ೨೭, ೨೮ ಅನುಕೂಲ.

## ಮಿಥುನ

ಪ್ರಕೃತಿಗೆ ಮೇಲಿಂದ ಮೇಲೆ ಕ್ಲೇಶ. ಹೆಂಡತಿಯ ಗೂಡ ವಿರೋಧ ಮಕ್ಕಳಲ್ಲಿ ಬಹಳ ಉನ್ನತಿ ಆದರೆ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ತೊಂದರೆ ಇದ್ದದ್ದೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ ಆದರೆ ಲಾಭ ಬಹಳ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಮಿತ್ರಸುಖ ಅನುಕೂಲ ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೩, ೨೮, ೨೯ ಅನುಕೂಲ.

## ಕರ್ಕ

ಪ್ರಕೃತಿ ಸಾಧಾರಣವೆ. ಸ್ತ್ರೀ ಸುಖ ಅನುಕೂಲ. ಆದರೆ ಉಳಿದ ಬಹುತರ ವಿಷಯುಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಲಾಭ ಮತ್ತು ಪ್ರತಿಷ್ಠೆ ಬಹಳ ಕಡಮೆ ಮತ್ತು ವೆಚ್ಚ ಇವೃದ್ಧಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ವಿಜಯ ಮಿತ್ರ ಸುಖ ಅನುಕೂಲ. ಪ್ರವಾಸಾದಿ ಕೆಲಸ ಕಷ್ಟದಿಂದಲೆ ಪೂರ್ಣ ಸಾಧ್ಯವಾಗುವ ಯೋಗ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೬, ೨೭ ಅನುಕೂಲ.

## ಸಿಂಹ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ ಆದರೆ ಸ್ತ್ರೀ ಸುಖದಲ್ಲಿ ವಿರಸ. ಆಪ್ತರು ತೊಂದರೆ ಅಂಜಿಕೆ ಹಾಕುವ ಮತ್ತು ಉಪದ್ರವ ಕೊಡುವ ಪ್ರಯತ್ನ ಮಾಡುವರು ಉದ್ಯೋಗದಲ್ಲಿ ಪ್ರಗತಿ ಉತ್ತಮ. ಆದರೆ ಪ್ರತಿಷ್ಠೆ ಮತ್ತು ಲಾಭ ಅಷ್ಟೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾದ ೧ ನೇ ಚರಣಕ್ಕೆ ಹೆಚ್ಚು ತೊಂದರೆ. ತಾ. ೨೪, ೨೫, ೨೮, ೨೯ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಮಾನ್ಯ ಅನುಕೂಲ. ಅಪ್ತಸುಖ ಉತ್ತಮ. ಆದರೆ ಅದರಲ್ಲಿ ಒಬ್ಬರು ಮರಣಹೊಂದುವ ಇಲ್ಲವೆ ಭಯಂಕರ ಆಪತ್ತಿಯಲ್ಲಿ ಬೀಳುವ ಸಂಭವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಅನುಕೂಲ. ಆದರೆ ಪ್ರತಿಯೊಂದು ಕೆಲಸ ಪೂರ್ಣವಾಗುವ ವರೆಗೆ ವಿಲಕ್ಷಣ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸಾದಿ ಕೆಲಸ ಕಷ್ಟದಿಂದಲೆ ಸಾಧ್ಯ. ಹಸ್ತಾದ ಕೊನೆಯ ೩ ಮತ್ತು ಚಿತ್ತಾದ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೬, ೨೭ ಅನುಕೂಲ.

## ತುಲಾ

ಪ್ರಕೃತಿ ಉತ್ತಮ. ಸ್ತ್ರೀ ಸುಖ ಅನುಕೂಲ ಆದರೆ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸಮಾಧಾನ ಕಡಮೆಯೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ ಆದರೆ ಲಾಭ ಅನುಕೂಲ. ದುಃಸ್ವಪ್ನಗಳಿಂದ ಮನಸಿಗೆ ಹುರಹುರಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲ ಸ್ಥಿತಿ. ಮಿತ್ರಸುಖ ಉತ್ತಮ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ನೇ ಚರಣಕ್ಕೆ ಅನುಕೂಲ. ತಾ. ೨೩, ೨೪, ೨೮, ೨೯ ಅನುಕೂಲ.

## ವೃಶ್ಚಿಕ

ಪ್ರಕೃತಿ ಸಾಧಾರಣವೆ. ಸ್ತ್ರೀ ಸುಖದಲ್ಲಿ ವಿರಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ಆದರೆ ವೆಚ್ಚವೂ ವಿಪರೀತ. ಕೆಲ ಲೋಕಾಪವಾದ ಬರುವದರಿಂದ ಮನಸ್ಸು ವ್ಯಗ್ರ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಪ್ರವಾಸಾದಿ ಕೆಲಸ ಹಿತಕರ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ೧ನೆ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೩, ೨೪, ೨೫, ೨೬ ಅನುಕೂಲ.

## ಧನು

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಯದು ಬಹಳ ಕೆಡುವದು. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣವೆ ಆದರೂ ಮಕ್ಕಳು ಹಿತ ಮತ್ತು ಕೆಲಮಟ್ಟಿಗೆ ಪ್ರಗತಿಯ ಕೃತಿಗಳನ್ನು ಮಾಡುವರು. ಉದ್ಯೋಗದಲ್ಲಿ ಜೋರಿನ ಪ್ರಗತಿ. ಮತ್ತು ತುಂಬ ಲಾಭ. ಆದರೆ ಪ್ರತಿಷ್ಠೆ ಕುಂದುವಂತೆ ಕೆಲ ಸಂಗತಿ ಸಂಭವಿಸುವವು. ಸ್ವಾರ್ಥದಲ್ಲಿ ಬಹಳ ಹೆಚ್ಚಳ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲ ಸ್ಥಿತಿಯಿದ್ದರೂ ಕೆಲ ಆಕಲ್ಪಿತ ಘಟನೆಗಳಿಂದ ಬಹಳ ವಿರಸ. ಪ್ರವಾಸ ಉತ್ತಮ. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯದು. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೩, ೨೪, ೨೫, ೨೬ ಅನುಕೂಲ.

## ಮಕರ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ ಆದರೂ ಮಕ್ಕಳೊಡನೆ ಮಹತ್ವದ ವಿಷಯುಗಳಲ್ಲಿ ಬಹಳ ಮತಭೇದವಾಗುವದರಿಂದ ಮನಸ್ಸು ವಿಮನಸ್ಕನಾಗವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ಆದರೆ ವೆಚ್ಚವೂ ವಿಪರೀತ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ತೊಂದರೆ. ಪ್ರವಾಸಾದಿ ಕೆಲಸ ಅತ್ಯಂತ ಅನುಕೂಲ. ಪಿರ್ಥಕವಾಗಿ ಅನೇಕರೊಡನೆ ಬಾಯಿಗೆ ಬಾಯಿ ಹತ್ತುವ ಪ್ರಸಂಗ. ಶ್ರವಣದ ಕೊನೆಯ ೩ ಮತ್ತು ಧನಿಷ್ಠಾದ ಮೊದಲನೆ ಚರಣಕ್ಕೆ ಹೆಚ್ಚು ಅನುಕೂಲ. ತಾ. ೨೬, ೨೭, ೨೮, ೨೯ ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣವೆ. ಆದರೆ ಸ್ತ್ರೀ ಸುಖ ಉತ್ತಮ. ಆಪ್ತರಿಂದ ಬಹಳ ತೊಂದರೆ. ಆದರೆ ಮಿತ್ರ ಸುಖ ಬಹಳ ಉತ್ತಮ. ಪ್ರಾಪಂಚಿಕ ಸುಖ ಅತ್ಯಂತ ಅನುಕೂಲ. ಉದ್ಯೋಗದಲ್ಲಿ ಒಳ್ಳೆ ಪ್ರಗತಿ ಜೋರು ಪ್ರತಿಷ್ಠೆ ಮತ್ತು ತುಂಬ ಲಾಭ. ಪ್ರವಾಸ ದೂರದ್ದು ಮತ್ತು ಗುಪ್ತವಾದುದು ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಕೀರ್ತಿಯ ಹೆಚ್ಚಳ. ಪತ್ರವ್ಯವಹಾರ ಮತ್ತು ಭೆಟ್ಟಿ ಉತ್ತಮ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ೧ನೇ ಚರಣಕ್ಕೆ ವಿಶೇಷ ಅನುಕೂಲ. ತಾ. ೨೩, ೨೪, ೨೮, ೨೯ ಅನುಕೂಲ.

## ಮೀನ

ಪ್ರಕೃತಿ ಸಾಧಾರಣವೆ ಆದರೆ ಪ್ರಾಪಂಚಿಕ ಸುಖ ಬಹಳ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಬಂಧುವರ್ಗದವರಲ್ಲಿ ಕ್ಲೇಶ ಮಿತ್ರಸುಖ ಉತ್ತಮ ಕೆಲ ಧಾರ್ಮಿಕ ಕೃತ್ಯಗಳು ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೇ ಯಶಸ್ಸು. ಪ್ರವಾಸಾದಿ ಕೆಲಸ ಹಿತದ್ದು. ಆದರೆ ಭೆಟ್ಟಿಯಲ್ಲಿ ಮೊದಲು ಸ್ವಲ್ಪ ವಿರಸ. ಉತ್ತರಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೩, ೨೪, ೨೫, ೨೬ ಅನುಕೂಲ.

# ತಾಯಿ ಮಗು

( ೧೫ನೇ ಪುಟದಿಂದ )

ಸಿದರು ಎಂಬದರ ಅರಿವೂ ಅರಿತ್ತು. ತಾನು ಇತರ ಸಾಮಾನ್ಯರಂತೆ ಯಾವ ಸಂಗತಿಯಲ್ಲೂ ಕಷ್ಟಪಡಬೇಕಾಗಿಲ್ಲವಲ್ಲ ಎಂಬ ವ್ಯಾಮೋಹ ವಾತ್ಸಲ್ಯವನ್ನು ಮರೆಯಾಗಿಸಿತ್ತು.

ರಾಧೆ ಆ ಮುದುಕಿಯನ್ನು ಕಟುವಾದ ದನಿಯಲ್ಲಿ, "ನಿನ್ನ ಮಗು ಸತ್ತರೆ ನನಗೇನು? ಹೋಗಾಚೆ." ಎಂದು ಗದ್ದರಿಸಿದಳು. ಪಾಪ! ಮುದುಕಿ ಮತ್ತೊಬ್ಬರ ಕಡೆ ನಡೆದಳು. ತನಗೆ ದುಡ್ಡು ಕೊಡಲಿಲ್ಲವಲ್ಲವೆಂಬ ಹಳಹಳಿಯಿಲ್ಲ ಅವಳಿಗೆ. ಅವಳದು ನಿರ್ವಿಕಾರ ಮುದ್ರೆ. ಮಗುವಿಗಾಗಿ ಒಂದು ದುಡ್ಡು ಕೊಟ್ಟರಾಗದೇ ಎಂದಷ್ಟೇ ಅವಳಿಗನಿಸುತ್ತಿತ್ತು.

ಸೀತಾಪತಿ ಇದೆಲ್ಲವನ್ನು ಗಮನಿಸಿರಲಿಲ್ಲ. ತಿಳಿದೂ, ಗಮನಿಸಲಿಲ್ಲವೆಂತಲ್ಲ. ಆದರೆ ಅವನ ಚಿತ್ತವೆಲ್ಲ ಮನೆಯಲ್ಲಿದ್ದ ತನ್ನ ಮಗುವಿನ ಕಡೆ ಹೋಗಿತ್ತು. ಆ ದಿನ ತನ್ನ ಹೆಂಡತಿ ಸಿನೇಮಾಕ್ಕೆ ಹೋದುದು. ಅಂದು ಇದೇ ರೀತಿ ಅತ್ತುದ್ದು. ಎಲ್ಲಾ ನೆನಪಾಯಿತು. ಮೈ ನಡುಗಿತು. ಆದರೆ ತೋರಗೊಡಲಿಲ್ಲ.

ಪ್ರವೇಶಕ್ಕಾಗಿ ಗಂಟೆಯಾಯಿತು. ಇಬ್ಬರೂ ಒಳಕ್ಕೆ ಹೋಗಿ ತಮ್ಮ ಜಾಗದಲ್ಲಿ ಕೂತರು. ಚಿತ್ರಪ್ರಾರಂಭವಾಯಿತು. ಚಿತ್ರವೇನೋ ಆಕರ್ಷಕವಾಗಿತ್ತು, ರಾಧೆ ನೋಡುವದರಲ್ಲಿ ತಲ್ಲೀನಳಾಗಿದ್ದಳು. ಸೀತಾಪತಿ ನೋಡುತ್ತಲೇ ಇದ್ದ ಆದರೆ ಇಂದು ಅವನಲ್ಲಿ ಮೂಕಭಾವ ನೆಲೆಸಿತ್ತು. ಮಧ್ಯಂತರ ಆಯಿತು. ಆದರೆ ಇಬ್ಬರೂ ಹೊರಬೀಳಲಿಲ್ಲ. ರಾಧೆಗೆ ಬೇಕಾದ್ದನ್ನು ತೆಗಸಿ ಕೊಟ್ಟ. ತಾನು ಏನೊಂದನ್ನೂ ಸ್ವೀಕರಿಸಲಿಲ್ಲ. ಚಿತ್ರ ಪುನಃ ಪ್ರಾರಂಭವಾಯಿತು. ಇಂದು ರಾಧೆಗೆ ತನ್ನ ಗಂಡನ ತರಹ ತಿಳಿಯಲಿಲ್ಲ. ಒಮ್ಮೆ ಗಂಡನೆಡೆ ನೋಡುವಳು. ಮಗದೊಮ್ಮೆ ಪರದೆಯೆಡೆ ನೋಡುವಳು.

ಈ ರೀತಿ ಮೂರು ಗಂಟೆಗಳ ಕಾಲ ಚಿತ್ರಮಂಟಪದಲ್ಲಿ ಕಳೆದು ಹೊರಬಿದ್ದರು. ಆದರೆ ಹೊರಗಿನ ದಾರಿಯೇ ಕಟ್ಟಾಗಿತ್ತು. ಒಂದೆಡೆ ಜನರು ಗುಂಪುಗೂಡಿ ಕೋಲಾಹಲ ನಡೆಸಿದ್ದರು. ಥೇಟರಿನೊಳಗಿಂದ ಮತ್ತಿಷ್ಟು ಜನ ಕೂಡುತ್ತಿದ್ದರು. ಹತ್ತು ನಿಮಿಷಗಳ ನುಗ್ಗಾಟದ ಮೇಲೆ ಈರ್ವರೂ ಹೊರ ಬಂದರು. ದಾರಿಯಲ್ಲಿ ಒಂದು ಕಾರು ನಿಂತಿತ್ತು. ಬಳಿಯಲ್ಲಿಯೇ ಒಂದು ಚಿಕ್ಕ ಮಗು ಸತ್ತು ಬಿದ್ದಿತ್ತು. ತಲೆ ಬುರುಡೆಯಿಂದ ರಕ್ತ ಹರಿಯುತ್ತಿದ್ದಿತು. ತಲೆ ಕಾರಿನ ಗಾಲಿಯ ಕೆಳಗೆ ಸಿಕ್ಕು ಜಜ್ಜಿ ಹೋಗಿರಬೇಕು. ಆಚೆ ಮುದುಕಿ ನಿದೆ ಹೋದಂತೆ ಬಿದ್ದಳು. ಅವಳಲ್ಲಿ ಪ್ರಾಣವಿರಲಿಲ್ಲ. ಮಗುವು ಸತ್ತ ಕೂಡಲೇ ತಾಯಿಯ ಜೀವ ಹಾರಿ ಹೋಗಿರಬೇಕು. ಸುತ್ತಲೆಲ್ಲ ಕೆಲ ಪೋಲೀಸು ಮಂದಿ. ಕಾರಿನ ಬಳಿ ಒಬ್ಬ ಸಿರಿವಂತ ಸಭ್ಯಗೃಹಸ್ಥ.

ರಾಧೆ ಸೀತಾಪತಿ ಈರ್ವರೂ ಹೊರಗೆ ಬಂದಾಗ ಅವರಿಗೆ ಮುದುಕಿ ಮತ್ತು ಮಗುವಿನ ಸಂಗತಿ ಗೊತ್ತಾಯಿತು. ಮುದುಕಿ ನಡುಗುತ್ತ ಮಗುವಿನೊಂದಿಗೆ ಬಳಿಯ ಬೀದಿಯ ಆಚೆ ಹೋಗುತ್ತಿದ್ದಳಂತೆ. ಅವಳಿಗೆ ಮೋಟಾರಿನ ಅಂತರ ತಾನು ದಾಟಬೇಕಾದ ಉದ್ದ ಲೆಕ್ಕ ತಿಳಿಯದೆ ಕಾರಿನ ಕೆಳಗೆ ಮುಗ್ಗರಿಸಿದಳು. ಮಗು ಸೊಂಟದಿಂದ ಸಿಡಿದು ಬಿದ್ದಿತು. ಮುದುಕಿ ನಿಶ್ಪ್ರಾಣಳು. ಮಗು ಕಾರಿಗೆ ಆಹುತಿಯಾಯಿತು. ಇದನ್ನು ನೋಡಲಾಗದೆ, ಭೋರಿಟ್ಟು ಅತ್ತು ಕರೆದು, ಕುತ್ತಿಗೆ ಹಿಸುಕಿಕೊಂಡು ಪ್ರಾಣ ಕಳೆದುಕೊಂಡಳಂತೆ.

ರಾಧೆಯ ಮನದ ಮೇಲೆ ಈ ತಾಯಿ-ಮಕ್ಕಳ ಚಿತ್ರ, ಮಾರ್ಮಿಕವಾಗಿ ಮೂಡಿಕೊಂಡಿತು. ಅದರ ಫಲವಾಗಿ ಅವಳಿಗೆ ತನ್ನ ಹೊಟ್ಟೆಯ ಮಗುವಿನ ನೆನಪಾಯಿತು. ನೆನಪು ಅವರನ್ನು ಮನೆಗೆ ಓಡಿಸಿತು. ಬಾಡಿಗೆಯ ಜಟಕಾ ಗಾಡಿ ಅವರಿಗೆ ಅವಶ್ಯಕವಾಗಲಿಲ್ಲ.

ಮನೆಗೆ ತಲುಪಿದಾಗ ಭಯಾನಕ ದೃಶ್ಯವೊಂದು ಕಾದಿತ್ತು. ವಿಧಿಯ ಕಾರ್ಯಕಲಾಪ. ಆಶಾಲತಾ ನಿಶ್ಚೇಷ್ಟಳಾಗಿ ಬಿದ್ದುಕೊಂಡಿದ್ದಳು. ದಾದಿ ಬಳಿಯಲ್ಲಿ ಕೂತು ಕೂಗಿಕೊಳ್ಳುತ್ತಿದ್ದಳು. ಸುತ್ತಲೆಲ್ಲ ಆಳುಗಳು ನೆರೆದಿದ್ದರು. ತಲೆಗೆ ಗಟ್ಟಿಯಾಗಿ ಬಿಳಿಯ ಬಟ್ಟೆಯೊಂದನ್ನು ಬಿಗಿದಿದ್ದರು. ಆಶಾಲತೆ ಇನ್ನೂ ಕಣ್ಣು ತೆರೆದು ತಾಯಿಯ ಬರವನ್ನು ಕಾದಿದ್ದಳು.

ರಾಧೆ ನೇರವಾಗಿ ಸಿಂಗಾರದ ಕೋಣೆಗೆ ಹೆಜ್ಜೆಗಡೆ, ಮಗುವಿದ್ದಲ್ಲಿಗೆ ಹೋದಳು. ಆ ದೃಶ್ಯವನ್ನು ಕಂಡು ನಡುಗಿದಳು. ಬಾಯ್ಬಿಡದಾಯಿತು. ಸನ್ನೆ ಮಾಡಿ ಗಂಡನನ್ನು ಒಳಕ್ಕೆ ಕರೆದಳು. ಸೀತಾಪತಿ ಮೂಕನಂತೆ ಒಳಕ್ಕೆ ಹೋದ. ತಾನು ಇಷ್ಟು ಹೊತ್ತೂ ಮನದಲ್ಲಿ ಕಟ್ಟಿದನ್ನು ನೆನೆದದ್ದನ್ನೇ ಪ್ರತ್ಯಕ್ಷವಾಗಿ ಕಂಡದ್ದಕ್ಕೆ ಎದೆ ಧಡಧಡಿಸಿತು. ಮಗುವನ್ನು ಎತ್ತಿಕೊಳ್ಳಲೂ ಹೋಗಲಿಲ್ಲ. ಒಂದೇಸಮನೆ ದಿಟ್ಟಿಸಿ ನೋಡುತ್ತಿದ್ದ. ರಾಧೆ ಆಶಾಲತೆಯನ್ನು ಹಾಸಿಗೆಯಿಂದೆತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡಳು.

"ಆಶಾಲತಾ,"

"... ..."

"ಆಶಾ, ಮಾತಾಡಮ್ಮಾ" ದನಿ ನಡಗುತಿತ್ತು.

"... ..."

"ಆಶಾ, ನನ್ನ ಆಶಾ" ಎಂದು ಮುದ್ದಿನಿದಳು.

ಕೊನೆಗೊಮ್ಮೆ ಆಶಾಲತಾ ತಾಯಿಯನ್ನು ಕಣ್ಣಿಟ್ಟು ನೋಡಿದಳು. "ಅಮ್ಮಾ" ಎಂಬ ದನಿ.

"ಕಂದಾ, ಏನಾಯಿತು? ತಲೆ ನೋಯುತ್ತದೆಯೇ?

ಉತ್ತರವಿಲ್ಲ.

ದಾದಿ ಹೇಳಿದಳು: ತಾನು ಇಲ್ಲದಾಗ ಮಗು ಉಪ್ಪರಿಗೆಯ ಮೇಲಿಂದ ಜಾರಿ ಕೆಳಕ್ಕೆ ಬಿದ್ದಿತೆಂದು.

ತಲೆಗೆ ಪೆಟ್ಟಾಗಿತ್ತು. ಆದಾಗಲೆ ಡಾಕ್ಟರರ ಉಪಚಾರ ಮಾಡಲಾಗಿತ್ತು. ಡಾಕ್ಟರರು ಧೈರ್ಯವನ್ನೇನೋ ಕೊಟ್ಟಿದ್ದರು. ಆದರೆ...?

ಮಗು "ಅಮ್ಮಾ" ಎಂದು ಮಂದ ದನಿಯಲ್ಲಿ ಕರೆಯಿತು. ರಾಧೆ ಮಗುವನ್ನೊಮ್ಮೆ ದಿಟ್ಟಿಸಿ ನೋಡಿದಳು. ಮಗು ತಣ್ಣಗಾಯಿತು. ಮಾತಿಲ್ಲ. ಎಚ್ಚರಿಲ್ಲ ಅಲ್ಲಿಗೇ ಪೂರ್ತಿ.

ರಾಧೆ ಕಂಬವಾಗಿ ಕುಳಿತಳು. ಸೀತಾಪತಿಯ ಕಣ್ಣೊಳಗಿಂದ ನೀರು ಪಟಪಟ ಉದುರಿತು. ಗಂಡಸಾದರೇನು? ಹೊಟ್ಟೆಯ ಮಗಳು ಈ ರೀತಿ ತೀರಬೇಕೆ?

o o o o

ರಾಧೆ ಇದೀಗ ಹುಚ್ಚಾಸ್ಪತ್ರೆಯಲ್ಲಿದ್ದಾಳೆ. ಸೀತಾಪತಿಗೆ ಸುಖವಿಲ್ಲ. ಕೋರ್ಟಿಗೆ ಹೋಗಿಯೇನೋ ಬರುವ. ಮನೆಯಲ್ಲಿ ಶೂನ್ಯ; ಮನದಲ್ಲಿಯೂ ಶೂನ್ಯ. ಆಸ್ಪತ್ರೆಗೆ ಬಂದು ರಾಧೆಯನ್ನು ಮಾತನಾಡಿಸಿದರೆ ರಾಧೆ "ಆಶಾಲತಾ ಎಲ್ಲಿ? ಕರೆತರಲಿಲ್ಲವೆ? ಹೋಗಿ ಕರೆತನ್ನಿ" ಎನ್ನುವಳು ಒಮ್ಮೆಲೆ ಎದ್ದು ಕೂಡುವಳ. "ನೀವು ಯಾಕೆ ನನ್ನನ್ನು ಇಲ್ಲಿ ಇರಿಸಿದ್ದೀರಿ. ಮನೆಯಲ್ಲಿ ಆಶಾಲತಾ "ಅಮ್ಮಾ" ಎಂತಾ ಅಳುತ್ತಿರಬೇಕು. ನನಗೇನೂ ಆಗಿಲ್ಲ ಎಂದು ಬಾಗಿಲತನಕ ಬರುವಳು. ಸೀತಾಪತಿ ತಡೆಯಬೇಕು ಆದರೆ...

ಇಷ್ಟು ದಿನದ ಸುಪ್ತ ತಾಯಿತನದ ಭಾವನೆ ಇದೀಗ ಜಾಗೃತವಾಗಿದೆ. ಅದೇ ಅವಳನ್ನು ಹುಚ್ಚಿಯನ್ನಾಗಿ ಮಾಡಿತ್ತು. ಆದರೆ ಏನು? ಸೀತಾಪತಿ ಆಶಾಲತೆಯನ್ನು ತರಲಾರ. ಸೀತಾಪತಿಯ ಸುಖಜೀವನ ಆಶೆ ಮಗು ಆಶಾಲತೆಯೊಡನೆಯೇ ಮಾಯವಾಗಿ ಹೋಯಿತು.

---

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು